# ಮನವಿ ೨

‘ ದಾರ್ಶಿಕ-ದರ್ಶಕ’ ಪದಪ್ರಯೋಗಗಳ ಮೇಲೆ ಈಗ್ಗೆ ಸುಮಾರು ಎರಡು ತಿಂಗಳುಗಳಿಂದಲೂ ವಿಪುಲ ಚರ್ಚೆಯಾಗಿ ಅಂತ್ಯದಲ್ಲಿ ‘ದರ್ಶಕ’ ಎಂಬುದೇ ಸಾಧುವಾದದ್ದು-ಸಮಂಜಸ ವಾದದ್ದು ಎಂಬುದಾಗಿ ಅನೇಕ ಆಧಾರಗಳ ಮೂಲಕ ಘನ ವಿದ್ವಾಂಸರುಗಳೂ ಹಿರಿಯರೂ ಆದಂಥ ವೈದ್ಯಗುರು ಶ್ರೀಮಾನ್ ಭಾರದ್ವಾಜ ರವರೂ, ಶ್ರೀಮಾನ್ ಜಿ. ಕೆ. ತಿಮ್ಮಣ್ಣಚಾರ್, ಎಂ. ಎ. ,ಬಿ. ಟಿ., ರವರೂ ಮತ್ತು ಕವಿ ಸಾರ್ವಭೌಮ ಶ್ರೀ ಗೋವಿಂದಪೈ ಎಂ. ಎ., ರವರುಗಳೂ ನಿರ್ಧರಿಸಿರುವುದರಿಂದ ಅದನ್ನೇ ಒಪ್ಪಿ, ತಿದ್ದಿಕೊಂಡಿರುತ್ತೇನೆ. ಈ ವೇಳೆಗೆ ಪುಸ್ತಕದ ಮುದ್ರಣವು ಸಂಪೂರ್ಣವಾಗಿದ್ದರಿಂದ ಸಾಧ್ಯವಾದಕಡೆಗಳಲ್ಲಿ ಮಾತ್ರತಿದ್ದಿದೆ. ಉಳಿದಕಡೆಗಳಲ್ಲಿ ದಾರ್ಶಿಕ ಎಂಬುದರ ಬದಲಾಗಿ ‘ ದರ್ಶಕ ’ ಎಂದು ಓದಿಕೊಳ್ಳಬೇಕಾಗಿ ಪ್ರಾರ್ಥನೆ.

‘ ಶ್ರೀನಂದನ ’

29-5-52

# ಆಶೀರ್ವಚನ

"ಶ್ರೀನಂದನ" ರು 'ದಾರ್ಶಿಕ' ಎಂಬ ನವೀನ ಪದ ಪ್ರಯೋಗದಿಂದ ಅದೊಂದು ನವೀನ ಧಾಟಿಯಲ್ಲಿ ಈ ದೃಶ್ಯವನ್ನು ಬರೆದಿರುವರು. ಸಾವಿರಾರು ವರ್ಷಗಳಿಂದ ಅದೆಷ್ಟೋ ರಾಷ್ಟ್ರಗಳ, ಜನಾಂಗಗಳ ಅಳಿವು ಉಳಿವುಗಳನ್ನು ಸಾಕ್ಷಿಯಾಗಿ ನೋಡುತ್ತ, ತನ್ನ ಇರುವಿಕೆಗೆ ಭಂಗ ಬರುವಾಗ ಭ ರ ತ ಮಾತೆಯು ವಿಭೂತಿಪುರುಷರನ್ನು ಆಗಾಗ್ಗೆ ಪ್ರಸವಿಸಿ, ಅವರ ಮೂಲಕ ಆಗಾಗ್ಗೆ ತನ್ನ ಅಮರ ಸಂದೇಶವನ್ನು ಜಗತ್ತಿನ ಕಲ್ಯಾಣಕ್ಕಾಗಿ ಸಾರಿಸುತ್ತ, ಜಗತ್ತಿನ ಸಕಲ ಧರ್ಮ ಸಂಸ್ಕೃತಿಗಳ ತತ್ತ್ವಗಳನ್ನು ತನ್ನಲ್ಲಿ ಅಳವಡಿಸಿಕೊಂಡು, ಅವುಗಳಿಗೆ ನಿತ್ಯನವೀನವಾದ ಅಜರ-ಅಮರವಾದ ರೂಪವನ್ನು ಕೊಟ್ಟು ಅಚ್ಚಳಿಯದ ತನ್ನ ವೈಶಿಷ್ಟ್ಯವನ್ನು ತೋರುವ ಭಾರತೀಯ ಐತಿಹಾಸಿಕ ಛಾಯೆಯು ಇದರಲ್ಲಿ ಕಂಡುಬರುತ್ತವೆ ಇದರಲ್ಲಿ ಭಗವಾನ್ ಬುದ್ಧದೇವ, ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧಿಜಿಯವರ ಅಮರ ಸಂದೇಶಗಳಿವೆ. ಗಾಂಧಿಜಿಯವರ ಆತ್ಮವನ್ನು ಅವರ ಶಿಷ್ಯವರ್ಗದವರೇ ಹೇಗೆ ಇನ್ನೂ ತಮ್ಮ 'ಗಾಂಧಿಭಕ್ತರ ಪ್ರೇಮ' ವೆಂಬ ವಂಚನಾತ್ಮಕ ಪಾಶದಲ್ಲಿ ಸಿಕ್ಕಿಸಿಕೊಂಡು, ಅದಕ್ಕೆ ಮೋಕ್ಷವಿಲ್ಲದಂತೆ ಮಾಡಿದ್ದಾರೆ; ಆ ಮಹಾತ್ಮರಿಗೆ ಮೋಕ್ಷ, ಶಾಂತಿ ಸಿಕ್ಕಬೇಕಾದರೆ ಅವರ ತತ್ತ್ವಗಳನ್ನು ಅವರ ಭಕ್ತರೆನಿಸಿಕೊಂಡವರು ಆಚರಣೆಗೆ

ತಂದು ಲೋಕಹಿತವನ್ನು ಸಾಧಿಸುವುದೊಂದೇ ಮಾರ್ಗ ಎಂದು " ಶ್ರೀನಂದನರು " ಇದರಲ್ಲಿ ತೋರಿದ್ದಾರೆ.

ಸಾಹಿತಿಕ ಸಂಘ ಮತ್ತು ಶಾಲೆಗಳ ವಾರ್ಷಿಕೋತ್ಸವ ಮತ್ತು ಇತರ ಸಂದರ್ಭಗಳಲ್ಲಿ ಮಕ್ಕಳು ಈ ದೃಶ್ಯವನ್ನು ರಂಗಸ್ಥಳಗಳಲ್ಲಿ ಆಡಿ ತೋರಿಸುವುದರಿಂದ ಗಾಂಧೀ ತತ್ತ್ವ ಪ್ರಚಾರಕ್ಕೆ ಅನುಕೂಲವಾಗುವುದು. ಜಗತ್ತಿನ ಇಂದಿನ ವಾತಾವರಣದಲ್ಲಿ ಗಾಂಧೀ ತತ್ತ್ವಗಳು ಅನುಷ್ಠಾನಕ್ಕೆ ಬರದೆ ಲೋಕಕ್ಕೆ ಶಾಂತಿ ದೊರೆಯದು.

ಪ್ರಚಾರಕಾರ್ಯಕ್ಕೆ ' ದೃಶ್ಯ ' ಗ್ರಂಥಗಳು ಅತ್ಯಂತ ಸಹಕಾರಿ. ಶ್ರೀ ನಂದನರು ಜಗತ್ತಿನ ಶಾಂತಿ, ಮಾನವನ ಮೇಲ್ಮೆಗಳಿಗೆ ಅಗತ್ಯವಾಗಿರುವ ಭದ್ರವಾದ ಬುನಾದಿಯುಮೇಲೆ ವಿಜೃಂಭಿಸುತ್ತಿರುವ, ಪ್ರಾಚೀನ ಭಾರತೀಯ ಸಂಸ್ಕೃತಿಯ ತತ್ತ್ವ ಪ್ರಚಾರಮಾಡುವ ಬೇರೆ ದೃಶ್ಯಕಾವ್ಯಗಳನ್ನು ಬರೆದು ಯಶಸ್ಸನ್ನು ಪಡೆಯುವಂತಾಗಲಿ ಎಂದು ಹಾರೈಸುವೆನು.

ಬಸವನಗುಡಿ
ಬೆಂಗಳೂರು ೪.
ವೈಶಾಖಬಹುಳ ೭. ನಂದನ ಸಂ.

ದ. ಕೃ. ಭಾರದ್ವಾಜ.

# ಮನವಿ

ಈಗ ನಮ್ಮ ಜನತೆಯಲ್ಲಿ ಶತಮಾನಗಳಿಂದಲೂ ಬೇರೂರಿದ್ದ ದಾಸ್ಯಭಾವವು ಕಳಚಿ, ಸ್ವತಂತ್ರಭಾವವು ಮೊಳೆಯುತ್ತಿರುವ ಕಾಲ. ಆ ಸ್ವಾತಂತ್ರ್ಯವು ನಮ್ಮ ಹಿಂದಿನ ವೈಭವದ ಚೌಕಟ್ಟಿನಲ್ಲಿ ಅಡಕವಾಗಿ, ಅವರ ಆದರ್ಶ ಉದ್ದೇಶಗಳ ಆಧಾರದಮೇಲೆ ಚಿರಸ್ಥಾಯಿಯಾಗಿ ನಿಲ್ಲುವ ಕೀರ್ತಿಕಳಶವಾಗಬೇಕೆಂಬುದು ಪ್ರತಿ ಭಾರತೀಯನ ಹಿರಿಯಾಸೆ. ಆದ್ದರಿಂದ ಈ ಕಾಲವನ್ನು ಒಂದು ಪರ್ವಕಾಲವೆಂದರೂ ತಪ್ಪಾಗಲಾರದು. ತನ್ನತನದ ಪರಿಪಾಲನ, ಪ್ರತಿಷ್ಠಾಪನ ಕಾಲವೆಂದರೂ ಸರಿ. ಹಾಗೂ ಮುಂದಿನ ಪೀಳಿಗೆಗೆ ನೀಡಬೇಕಾಗಿರುವ ಶಕ್ತಿಯ ಪ್ರಚೋದನ ಕಾಲವೆಂದರೂ ಅಹುದು. ಈಗಿನ ಹೊರೆ ಸಾಮಾನ್ಯವಲ್ಲ. ಕಾಲವರಿತು, ಕಾರ್ಯವರಿತು ತುಂಬುಹೊಣೆಗಾರಿಕೆಯಿಂದ ಮುಂದಡಿಯಿಡಬೇಕಾಗಿದೆ. ಈ ಭಾವನೆಯ ಆಧಾರದ ಮೇಲೆ ಬರೆದ ಈ ಸಣ್ಣ ಪುಸ್ತಕವು ನಮ್ಮ ಯುವಕವೃಂದಕ್ಕೆ ಸ್ವಲ್ಪ ಮಟ್ಟಿಗಾದರೂ ಸಹಾಯ ನೀಡಬಲ್ಲದೆಂದು ಭಾವಿಸಿದ್ದೇನೆ. ಹಿಂದೂ ಸಂಸ್ಕೃತಿಯು ಶ್ರೇಷ್ಠತೆಯಿಂದಲೂ, ಧೈರ್ಯ ಸಾಹಸದಿಂದಲೂ ಕೂಡಿ ಸಿದ್ಧಾಂತ ಬದ್ಧವಾಗಿ ಶೋಭಿಸುವುದೆಂಬುದು ಧ್ವನಿತವಾಗುವಂತೆ ರೂಪಿಸಲು ಪ್ರಯತ್ನಪಟ್ಟಿದ್ದೇನೆ. ಬುದ್ಧ, ವಿವೇಕಾನಂದ, ಗಾಂಧಿಯಂತಹ ಹಿರಿಯ ವ್ಯಕ್ತಿಗಳ ಬೋಧನೆಯನ್ನು ಈ ಸಣ್ಣ ಪುಸ್ತಕದಲ್ಲಿ ನಿರೂಪಿಸಿದ್ದೇನೆನ್ನುವುದು ಆಕಾಶದ ಆವರಿಕೆಯ ಚಿಕ್ಕೆಗಳನ್ನು ಹಿಡಿದು ಕಂಡಿಯಲ್ಲಿ ಸಂಚರಿಸುವಂತೆ ಮಾಡಿದ್ದೇನೆನ್ನುವಷ್ಟು ಹಾಸ್ಯಾಸ್ಪದವಾದರೂ ಆಗಬಾರದು!

ಮೊದಲು ಇದನ್ನು ದರ್ಶಕ, ದರ್ಶಿ (Guide) ಎಂಬು ದಾಗಿ ಕರೆದು ಕೊನೆಯಲ್ಲಿ ಅವು ಅಷ್ಟು ಸಮಾಧಾನವಾಗದ ಕಾರಣ ಕಲ್ಪಿತವಾದ (Self-coined) 'ದಾರ್ಶಿಕ' ಎಂದು ಕರೆಯಲಾಯಿತು. ನೋಡುವ-ನೋಡಿಸುವ ಎರಡು ಕ್ರಿಯೆ ಗಳು ಏಕಕಾಲದಲ್ಲಿ ಒಂದೇ ಕರ್ತೃವಿನಿಂದ ನಡೆಯಲ್ಪಡುವುದ ರಿಂದ ಈ ಕಲ್ಪನೆಗೆ ಕಾರಣವಾಯಿತು. ನನಗೆ ತಿಳಿದ ಮಟ್ಟಿಗೂ ಮತ್ತು ಕೆಲವು ಪಂಡಿತರನ್ನು ಕೇಳಿ ತಿಳಿದ ಮಟ್ಟಿಗೂ ಬೇರೆ ಯಾವ ಪದವೂ ಈ ಅರ್ಥಕ್ಕೆ ಹೊಂದಿಕೊಳ್ಳುವಂತೆ ತೋರ ಲಿಲ್ಲ. ತಿಳಿದಂತಹ ವಿದ್ವಾಂಸರು ಕಲ್ಪಿತವಲ್ಲದ ಬೇರೆ ಪದ ವನ್ನು ಸೂಚಿಸಿದಲ್ಲಿ ಶಿರಸಾವಹಿಸಿ ತಿದ್ದಿಕೊಳ್ಳುತ್ತೇನೆ.

ಸುಲಭವಾಗಿ ತಿಳಿಯಲೆಂಬ ಅಪೇಕ್ಷೆಯಿಂದ ನವುರಾದ ಹಳಗನ್ನಡ ಹೊಸಗನ್ನಡ ಪದಗಳ ಜೋಡಣೆಯಿಂದ ಹೊಸ ರೀತಿಯಲ್ಲಿ ಬರೆದಿದೆ. ಇದು ಎಷ್ಟರಮಟ್ಟಿಗೆ ಸ್ವಾಗತಾರ್ಹವೋ ಕಾದು ನೋಡಬೇಕಾದುದು. ಇದರಲ್ಲಿ ಯಾವ ಛಂದಸ್ಸಿನ ನಿಯಮವನ್ನೂ ಅನುಸರಿಸದೆ ಭಾವಕ್ಕೆ ಹೆಚ್ಚು ಪ್ರಾಧಾನ್ಯ ಕೊಟ್ಟು ಸರಳವಾಗಿ ಓದಬಹುದಾದ ಶೈಲಿಯಲ್ಲಿ ರಚಿಸಿದೆ.

ಇದರ ಮುದ್ರಣವು ಕೇವಲ 8 ದಿನಗಳಲ್ಲೇ ಆದುದು ಸ್ತೋತ್ರಾರ್ಹ. ಕರಡು ಪ್ರತಿಯ ನಿರ್ವಹಣೆಯ ಕಾರ್ಯದಲ್ಲಿ ಸಾಕಷ್ಟು ಶ್ರದ್ಧೆ ವಹಿಸಿಲ್ಲವೆಂಬುದಕ್ಕೆ ಅಲ್ಲಲ್ಲಿ ಕಂಡುಬರುವ ದೋಷಗಳೇ ಸಾಕ್ಷಿಯಾಗಿದ್ದರೂ ಮುಂದೆ ಸರಿಪಡಿಸಿಕೊಳ್ಳ ಲಾಗುತ್ತದೆಂಬ ಭರವಸೆ ಕೊಡಲಾಗಿದೆ. ಪ್ರಮಾದ ವಶದಿಂದ ಆಗಿಹೋಗಿರುವ ಇವಕ್ಕಾಗಿ ಓದುಗರ ಕ್ಷಮೆಯನ್ನು ಬೇಡು ತ್ತೇನೆ. ಸಸ್ವಸ್ವೆ ನೆರವಾಗುವಂತೆ ಕೊನೆಯಲ್ಲಿ ಒಂದು

ತಪ್ಪೋಲೆಯನ್ನು ಕೊಡಲಾಗಿದೆ. ಓದುಗರು ದಯವಿಟ್ಟು ಅದನ್ನು ಗಮನಿಸಬೇಕಾಗಿ ಪ್ರಾರ್ಥನೆ.

ಇದನ್ನೋದಿ ತಮ್ಮ ಮೆಚ್ಚುಗೆಯ ಅಭಿಪ್ರಾಯವನ್ನು ಕೊಡುವುದರಮೂಲಕ ಪ್ರೋತ್ಸಾಹಿಸಿ, ಹರಸಿದ ಪೂಜ್ಯರೂ ಹಿರಿಯಸಾಹಿತಿಗಳೂ (ಇಂಗ್ಲೀಷ್ - ಇಂಗ್ಲೀಷ್, ಕನ್ನಡ ನಿಘಂಟಿನ ಮತ್ತು ಆಹಾರ ವಿಜ್ಞಾನ, ದಾಂಪತ್ಯ ವಿಜ್ಞಾನ ಸಂತಾನ ವಿಜ್ಞಾನಾದಿ ಹಲವಾರು ಗ್ರಂಥಕರ್ತರೂ) ಆದ ವೈದ್ಯಗುರು ಶ್ರೀಮಾನ್ ದ. ಕೃ. ಭಾರದ್ವಾಜರವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಮತ್ತು ಇದರಲ್ಲಿ ಅಲ್ಲಲ್ಲಿ ಕಂಡ ಕೆಲವು ನ್ಯೂನತೆಗಳನ್ನು ಎತ್ತಿ ತೋರಿಸಿ ಸಲಹೆಗಳನ್ನು ಕೊಟ್ಟು, ಹರಸಿ ಪ್ರೋತ್ಸಾಹಿಸಿದ ಘನ ವಿದ್ವಾಂಸರೂ; ಕರ್ಣಾಟಕ ಕವಿ ಸಾರ್ವಭೌಮರೂ ಆದ ಪೂಜ್ಯ ಗೋವಿಂದಪೈಅವರಿಗೆ ಕೃತಜ್ಞತಾಪೂರ್ವಕ ವಂದದೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಕೈ ಬರಹದ ಪ್ರತಿಯನ್ನು ಓದಿ ಪತ್ರ ಮೂಲಕವೂ ಪ್ರತ್ಯಕ್ಷವಾಗಿಯೂ ಮೆಚ್ಚಿ ಪ್ರೋತ್ಸಾಹಿಸಿದುವ ನನ್ನ ಗೆಳೆಯ ರಾದ ತರುಣ ಸಾಹಿತಿಗಳಿಗೆ ಆದರ ಪೂರ್ವಕ ವಂದನೆಗಳನ್ನು ಅರ್ಪಿಸದಿರಲಾರೆ. ಪಡಿಯಚ್ಚುಗಳನ್ನು ಕೊಟ್ಟು ಸಹಕರಿಸಿದ ಮೆಸರ್ಸ್ ರಾಮಕೃಷ್ಣ ಅಂಡ್ ಕೊ., ರವರಿಗೂ ಬೆಂಗಳೂರು ಬುಕ್ ಸೆಂಟರಿನವರಿಗೂ ಮತ್ತು ಮೊದಲಿನಿಂದ ಎಲ್ಲಾ ವಿಧದಲ್ಲೂ ನೆರವಾಗಿ ನಿಂತು ಅತಿ ಶೀಘ್ರವಾಗಿ ಮುದ್ರಿಸಿ ಪ್ರಕಟಿಸಿರುವ ಎಂ. ಎಸ್. ಅಂಡ್ ಸನ್ಸ್ ರವರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

'ಶ್ರೀನಂದನ'

## ಪಾತ್ರ ವಿವರ :-

ದಾರ್ಶಿಕ

ಋಷಿ

ಆಚಾರ್ಯ

ಬುದ್ಧಾಶ್ರಮದ ಹೆಣ್ಣು ಮಕ್ಕಳು

ಬುದ್ಧ

ವಿವೇಕಾನಂದ

ಗಾಂಧಿ

ಜನಗಳು

॥ಶ್ರೀ ವಿನಾಯಕ ಪ್ರಸೀದ ॥

# ದಾರ್ಶನಿಕ

(ಈಗಿನ ಜೀವನ ಹೊಯ್ದಾಟದಲ್ಲಿ ಸಿಕ್ಕಿ, ಮನೋದೌರ್ಬಲ್ಯದಿಂದ ಸಂಕಟಪಡುವ ಜನಜಂಗುಳಿಯನ್ನು ಕಂಡು, ಯುವಕನಾದ ದಾರ್ಶನಿಕನು ಅದಕ್ಕೆ ಕಾರಣವನ್ನು ಯೋಚಿಸುತ್ತಾ ಕುಳಿತಿರುವನು.

ಹಾಗೆಯೇ ಯೋಚಿಸುತ್ತಿರುವಲ್ಲಿ ಮೆಲ್ಲಗೆ ನಿದ್ರೆ ಹತ್ತಿ ಮಲಗುವನು. ಅದೇ ಚಾಪಲ್ಯದಿಂದ ಕನಸಿನಲ್ಲಿ ಹಿಮತ್ಪರ್ವತಕ್ಕೆ ಹೋದಂತೆ ಅಲ್ಲಿ ತಪೋಮಹಿಮರ, ತಾತ್ವಿಕರ, ಸುಧಾರಕರನ್ನು ಕಂಡು ಚರ್ಚೆ ಮಾಡಿದಂತೆ ದೃಶ್ಯಗಳು ಗೋಚರವಾಗುತ್ತಿರುವುವು.)

## ದೃಶ್ಯ ೧

(ಹಿಮತ್ಪರ್ವತದ ಮಾನಸ ಸರೋವರದ ಬಳಿ ದಾರ್ಶನಿಕನ ಪ್ರವೇಶ.)

ದಾರ್ಶನಿಕ –

ಮುಗಿಲ ಮುತ್ತಿಡುವವೆತ್ತರದ ಬೆಳ್ಳಿಬೆಟ್ಟ ಕಾವಲಲಿ
ಆರ್ಯಋಷಿವರರು ಮಿಂದಿರುವ ಈ ಸರಸಿ ಪಾವನವು !
ಆ ಸೋಮಸೂರ್ಯರ ಕುಲವೆಲ್ಲ ಇಲ್ಲಿ ಪಾವನವು!
ಯಕ್ಷ ಕಿನ್ನರ ದೇವ ಮಾನವರೆಲ್ಲ ಇಲ್ಲಿ ಪಾವನವು!
ಭಾರತದ ಭವ್ಯ ಭಂಡಾರದಲಿ ಇದೆ ಮಾಣಿಕವು
ಪಾಪಗಳ ಕಳಚಿಟ್ಟು ಪುಣ್ಯಗಳ ಹೊರಿಸಿಟ್ಟು
ತಂಪಿನುಪಚಾರವೆಸಗುವುದೆ ? ಈ ಸರಸಿ!!

(ಮರೆಯಿಂದ ಧ್ವನಿ)

ಎಸಗುವುದು, ಎಸಗುವುದು.

**ದಾರ್ಶಿಕ –**

ಅದುಂಟು! ಮರಿಯಲ್ಲಿ ಮಾರ್ಜನಿಯ ಮಾಡುವರು
ಇದ ತಾಪಸರ, ತಾತ್ತ್ವಿಕರ ಬೀಡೆಂದು ಕೇಳಿಹೆನು
ತಪವಾಚರಿಸೆ ಆರು ಬಂದಿಹರೋ? ಕಾಣೆ
ನೋಡುವೆನು.

(ಮುಂದಕ್ಕೆ ಹೋಗಲು ಋಷಿಗಳ ದರ್ಶನವಾಗುವುದು.)

ಋಷಿವರರು!

ನಮಿಸುವೆನು ಋಷಿವರ್ಯ.

**ಋಷಿ –** ದೀರ್ಘಾಯುಃ

**ದಾರ್ಶಿಕ –**

ಎಮಗೆಲ್ಲಿ ದೀರ್ಘಾಯು ಋಷಿವರ್ಯ!
ಎಮ್ಮನಾಡಲಿ ಆಯು ಅಲ್ಪವಾಗಿರೆ
ಬಾಡಿನಾಣಗೆ ಬರಿದೇಕೆ ಹರಸುವಿರಿ?

**ಋಷಿ –** ಎಮ್ಮನುಗ್ರಹಕೆ ತಪದ ಬಲವುಂಟು.

**ದಾರ್ಶಿಕ –** ಉಂಟುಂಟು,

ತಪದ ಬಲದಿಂದ ತಿಳಿದಿಹಿರಿ ವೇದಗಳ
ತಿಳಿಸಿದಿರಿ ಶಾಸ್ತ್ರಗಳ ಧರ್ಮಗಳ;
ಅಲ್ಲದೊಡೆ, ಈ ಭರತಖಂಡದಿ
ಬಲವುಂಟೆ? ಬೆಳಕುಂಟೆ?

ಆದೊಡೇಂ,

ಈ ಯುಗದಿ ನಿಮ್ಮ ತಪಕೆ ಬಲವಿಲ್ಲ
ನಿಮ್ಮ ನೀತಿಯುತ ಮಾತುಗಳು
ಶಾಸ್ತ್ರಗಳು ಧರ್ಮಗಳು ಸತ್ತಿಹವು!

**ಋಷಿ** – ಸತ್ತಿಹವು!
ದಿಕ್ಕೆಲ್ಲ ಸವೆದರೂ,
ಧೃವತಾರೆ ನಂದಿದರೂ
ನಂದಲಾರವವು.

ಅವಕೆ ಸಾವುಂಟೆ? ಹುಟ್ಟುಂಟೆ?

ಯೋಗದಲಿ ಕಂಡಿಹೆವು
ಯೋಗದಲಿ ಮಾಡಿಹೆವು
ಯೋಗದಲಿ ಬೆಳೆಸಿಹೆವು
ಅವಕೆ ಸಾವುಂಟೆ? ಇಲ್ಲಿಲ್ಲ.

**ದಾರ್ಶಿಕ** –

ಈ ಗಗನ ಹಿಮರಾಶಿ ಮಧ್ಯದಲಿ
ಚಳಿಯಿಂದ ಸೆಡೆದಿಹುದು ನಿಮ್ಮ ಮನ
ಮೊದಲೆರಡುಮೂರು ಯುಗದಲಿ
ನಿಮ್ಮಾಟವಾಡಿದಿರಿ, ನೋಡಿದಿರಿ,
ಈ ಯುಗದಿ ಅವಕೆ ತಾವಿಲ್ಲ ಋಷಿವರ್ಯ

ಕೇಳಿರಾ? ಕಲಿಯುಗದಿ ಎಮ್ಮನಾಡ—

ಧರ್ಮವದು ಬಯಲಾಗಿ ಹೋಗಿಹುದು.
ಸ್ವಾರ್ಥತೆಯೆ ಸ್ವತಂತ್ರವಾಗಿಹುದು.
ಅಜ್ಞಾನಸಾಗರವೆ–ಸುಜ್ಞಾನ ಶರಧಿಯಹುದು.

ಕರ್ಮಕ್ಕೆ ಕಟ್ಟುಂಟೆ? ಧರ್ಮಕ್ಕೆ ತಾವುಂಟೆ?
ಸಿಷ್ಟಿತನದ ನೆಡೆಯುಂಟೆ? ನೆಲೆಯುಂಟೆ?
ಬಡತನದ ಬೇಗೆಯೊ–ಸಿರಿತನದ ಸಂಭ್ರಮ.
ಹೆಣ್ಣುಗಳ ಮಾರುವರು ಗಂಡುಗಳ ಕೊಳ್ಳುವರು.
ನ್ಯಾಯವೆಂದಾಡುವರು–ಅನ್ಯಾಯ ಮಾಡುವರು.
ಸರ್ವರಿಗು ಭಗವಂತ ಸರ್ವರಲಿ ಭಗವಂತ
ಒಬ್ಬನೆಂದಾಡಿ, ಸಾವಿರ ದೇವರ ಮಾಡಿಹರು.
ಹಣವುಂಟೆ ಗುಣವೆಂದು ಹೆಣವಾಗಿ ಗಳಿಸುವರು.
ಕಲಿತುದೇ ವಿದ್ಯೆ, ಬರೆದುದೇ ಶಾಸ್ತ್ರ.

ಕಂಡಿರಾ ಋಷಿವರ್ಯ!

ನಿಮ್ಮ ತಪಕೆ ರಕ್ಷಿಪ ಬಲವುಂಟೆ?
ಪವಿತ್ರ ಸಂದೇಶ ಶಾಸ್ತ್ರಗಳ
"ದೀರ್ಘಾಯು"ಮಾಡಿರ್ಪೆ!

ಋಷಿ – ಮಾಡಿಹೆವು.

**ದಾರ್ಶಿಕ** –

'ಮಾಡಿಹೆವು'–ಏನ ಮಾಡಿಹಿರಿ?
ದೇವ–ವೇದಗಳೆಂಬ ಕಲ್ಪನೆಯ ತೆರೆಯಲ್ಲಿ
ಧರ್ಮ–ಕರ್ಮದ ಬಣ್ಣಗಳ ಬಿಗಿಯಿಂದ
ನರಪ್ರೇತ ಚಿತ್ರಗಳ ಚಿತ್ರಿಸಿಹಿರಾ?
ಸತ್ಯ–ಸಹನೆಗಳೆಂಬ ಮಾಲೆಗಣ್ಣಿಸಿಟ್ಟು
ನಿರ್ಲಿಪ್ತ ಬಡಭಾವನೆಯ ತುಂಬಿ
ಆ ಗೊಡ್ಡು ತತ್ವಗಳಷ್ಟು ಬರಿಸಿ

ಡಾಂಗೆಟ್ಟು, ದಣಿವಾಚಾರಗಳ ಹುಗಿಸಿ
ಅದೋ: ಸಗ್ಗ! ಇದೋ ನಾಕ!
ಇದೇ ಜೀವ! ಅದೇ ದೇವ!
ಎಂದೆನುವ ತಾಳಮೇಳಗಳ ಮಾಡಿ,
ತೊಗಲು ಗೊಂಬೆಯಾಟ ನಡೆಸಿಹಿರಾ?

**ಋಷಿ** – (ಮೌನವಾಗಿರುವರು)

**ದಾರ್ಶಿಕ** –

ಮೌನವೇಕೆ ಋಷಿವರ್ಯ, ಆಡಬಾರದೆ?
ಅಯ್ಯೋ, ಕಣ್ಣೇಕೆ ಹನಿಗೂಡಿಹವು?
ಕ್ಷಮಿಸಿ ಋಷಿವರ್ಯಾ, ಬೇಡದಾನಿಮಗೆ
ಆಡಿ ಬವಣೆ ಮಾಡಿಹೆನು. ಕ್ಷಮಿಸುವುದು.

**ಋಷಿ** –

ಕ್ಷಮೆಗೆ ಕಾರಣವಿಲ್ಲ ಮಗನೆ!
ನಾವಿತ್ತ ದಿವ್ಯ ಸಂದೇಶ ಬೆಳಕಲ್ಲಿ
ಕತ್ತಲ ಗವಿಗೆ ಕಣ್ಮುಚ್ಚಿ ನಡೆಸು
ಕಾಳೋರಗವ ತುಳಿದಿಹಿರಿ,
ವಿಷವೇರಿ ನರನಾಡಿಗಳ ದಹಿಸುತಿರೆ,
ಮನವೆಲ್ಲ ವಿಷಹೊಗೆಯಾಗಿಹುದು.
ಅದಕಾಗಿ ಕಣ್ಣಾಹನಿ.

**ದಾರ್ಶಿಕ** –

ಸಾವು ನೋವನು ಬಿಟ್ಟಿರುವ
ನಿಮಗೇಕೆ ? ಕಣ್ಣಾಹನಿ ಋಷಿವರ್ಯ

**ಋಷಿ–**

ನಮ್ಮ ಮುಮ್ಮುಗಳು ನೀವ್
ನಮ್ಮ ಆತ್ಮದ ಕೊನರುಗಳು,
ನಮ್ಮ ರಕ್ತದ ಜೀವ ಬಿಂದುಗಳು.

**ದಾರ್ಶಿಕ–** ಅಂತಾದೊಡೆಮಗೇಕೆ? ಈ ಗತಿ.

**ಋಷಿ–**

ನೆಲೆ ನಿಲ್ಲದ ಮನದಿಂದ
ಅಶ್ರದ್ಧೆ–ಆತುರದಿಂದ.

**ದಾರ್ಶಿಕ–**

ನಿಮ್ಮ ವಾಣಿಗಳೋ ಗುಟ್ಟಾಗಿಹವು.
ಕಬ್ಬಗಳೋ ಕಲ್ಲಿ ಕಡಲೆ
ಆದೆಂತು ಮನ ನೆಲೆ ನಿಲ್ಲುವುದು ? ಋಷಿವರ್ಯ.

**ಋಷಿ–** ಉಂಟೆ ?

ಗುಟ್ಟಿಲ್ಲ, ತೆರೆದಿಟ್ಟ ಗುಟ್ಟು
ರಸಕಬ್ಬ ನಬ್ಬ.
ಎಲ್ಲರಿಗು ಹಕ್ಕುಂಟು ಸಿಹಿಯುಂಟು
ಇದೆ ನಿಮ್ಮ ಉದ್ಧಾರ ಸಿದ್ಧಾಂತ.
ನಿಂತು ನೋಡಿರೈ, ನಡೆದು ನೋಡಿರೈ
ನಿಜದ ಕಾಣುವಿರಿ, ನೆಮ್ಮದಿ ಪಡೆವಿರಿ.

**ದಾರ್ಶಿಕ–**

ಈಗ ಎಮ್ಮನಾಡಿಂಗೆ ಪರನಾಡಿಂದ
ಬಂದಿಹವು ವಾಣಿಗಳು ಶಾಸ್ತ್ರಗಳು

ಅವು ಎನ್ನ ಉದ್ಧಾರವೆಸಗುವುವು

**ಋಷಿ—** ಮಗನೇ

ಮಂಕೇಕೆ ಕವಿದಿಹುದು ನಿನಗೆ!

ಅಲ್ಲಿಂದ ಬಂದಿಲ್ಲವೈ
ಇಲ್ಲಿಂದ ಪೋಗಿಹುದು.

ಎನ್ನ ಜೀತಿಂದ ಹಾಯ್ದೊಂದು ಕಿರಣ
ಪ್ರತಿಫಲಿಸಿ ಚಂದ್ರಕಾಂತಿಯಾಗಿಹುದು.
ಅದಕಂಡು ಹಿಗ್ಗುವ ಬಾಯ್ ಬಾಯಿ ಬಿಡುವಿ
ವಜ್ರ ಮಾಣಿಕ್ಯವಿರೆ ಸೊರ್ಣಗೊಡವೆ ಏಕೆ?

**ದಾರ್ಶಿಕ—** ಉಂಟೆ?

ಅವರ ಸಾಧನವೇಂ ಸಾಮಾನ್ಯವೇ?

ಬ್ರಹ್ಮ ಸೃಷ್ಟಿಯ ಕೆರಳಿಸಿ
ಬೇರೆ ಜಗವನೆ ತೋರಿಹರು.
ಸೃಷ್ಟಿ ನಿಯಮವ ಭೇದಿಸಿ
ಸೃಷ್ಟಿ ಪಂಥವ ಹೂಡಿಹರು.
ನಡೆನುಡಿಯೋ—ನವೀನ ನವುರು
ಇದಕಿಂತ ಹಿರಿದುಂಟೆ? ಸಿರಿಯುಂಟೆ?

**ಋಷಿ —** ಮಗನೇ,

ನಿನ್ನ—ಜ್ಞಾನ ನಿನ್ನ ದಹಿಸುತಿಹುದು.
ನಿಮ್ಮ ರೂಪಿನ ಮೋಹವ ನೀವೇ
ಮರೆಮಾಡುವುದೆ? ಅವರದ

ತಂಬುಲದ ಬಿಕ್ಕೆಗೆ ಕೈಯೊಡ್ಡಿ
ಕೂಡುವುದೆ ?

ಕಪ್ಪೆಕೂರ್ಮಗಳ ತೆರದಿ
ಸಪ್ಪೆಜೀವನಮಾಡಿ
ಹೆತ್ತೊಡಲ ಬಂಜೆ ಮಾಡುವುದೆ ?

ನಿಮ್ಮನಾಡದು ಸಾಮಾನ್ಯ ನಾಡಲ್ಲ.
ಪುಣ್ಯಭೂಮಿಯದು, ಯೋಗ ಗುಹೆಯದು.
ತಾಪಸರ ಪರ್ಣಶಾಲೆ–ಶಾಸ್ತ್ರಗಳ ಸೃಷ್ಟಿ ಇಲ್ಲಿ.
ವಿಜ್ಞಾನ–ಸುಜ್ಞಾನ ಎಲ್ಲ ಇಲ್ಲಿ
ವೇದವೇದಾಂತದ ಹುಟ್ಟು ಇಲ್ಲಿ
ಭಾರತಿಯು ಭವ್ಯನೋಟ ಅನುಪಮ.

ಅವಳ ಮಹತ್ವ ಕಡಲ ಕಾಣು.
ಅವಳ ರೂಪೋ ವಿರಾಡ್ರೂಪು.
ಅವಳುಸಿರು ಪರಿಮಳಕು ಹೆಸರು.
ಅವಳ ರಾಗ ರಾಗದ ಮಧುರ ಮೂಸುವುದು ಮುಗಿಲ.
ಮೂಡಲು ಮಡಿ ಮಡಿಯು ವಜ್ರದ ಹರಳು.
ಕೊರಳ ಕಾಣು ಸರಸರದ ವಾಹಿನಿಯರ ಹೊರಳು.

ರೂಪುರೇಷೆಗಳಿಲ್ಲ ಕಣ್ಣು ಕಳಚುವ ಮಿಂಚಿನ್ನೊವರು.
ಉದರ ಒದರುವುದೋಜೆಯು.
ಕುಂಡಕುಂಡದ ತೇಜ ಚಿಮ್ಮುವುದು.
ಧರ್ಮ–ಕರ್ಮದ ಹಾಸು ಹೊಕ್ಕಲಿ
ನೈದ ಉಡೆ ಉಟ್ಟಿಹಳು.
ಮಂಗಳದ ಮಾತೆ ತೊಟ್ಟಿಹಳು

ಶುಭಮಂಗುರವ ಶೋಭನದ ಬಳಿಯ,
ಶಾಂತಿಕಾಂತಿ–ಕುಂಕುಮ ಕೇಸರ ತಿಲಕ
ಹೊಳೆಹೊಳೆವ ಕಾಣುವುದು ಫಾಲದಿ.

ಕೆಚ್ಚುಮೆಚ್ಚಿನ ಕುಂಡಲ ಕಣ್ಣೆವರಿ
ಕಾಣುವುದು ಕಿವಿಯಲ್ಲಿ.
ಅಲ್ಲಿಂದ ಓಲಾಡ್ವ ಸಾಹಿತ್ಯ ಸುತ್ತಿನ
ಮುತ್ತುಗಳ ಚಳತುಂಬು ತೂಗುವುದು
—ಕೂಗುವುದು.

ಬಿಲ್ಲಿದೆಯು ರಾವುತರಿಂ ಬಿಗಿಸಿಹುದು ಭುಜಕೀರ್ತಿ.
ಇತಿಹಾಸ ಸಾಲಿನಲಿ ಕೋಪ ಕರಿಮಣಿಯು ನಡುವೆ
ತೂಗುವುದು ಮಂಗಲದ ಬಟ್ಟು–ಹಿರಿತನದ ನೆಟ್ಟು.
ರಾಶಿರಾಶಿ ತೇಜದಾ ಹಿಮಂತ
ಹಿರಿದಾದ ಭಾರತಿಗೆ ಹಿರಿಮುಕುಟ

ಮಗನೇ,

ಅವಳೆದೆಯಲಿ ಹರಿದಾಡ್ವ
ಹಸುಗೂಸು ನೀ ಧನ್ಯ! ಧನ್ಯ!!

**ದಾಶಿಕ**–

ಅಹುದೆ ಋಷಿವರ್ಯ!
ಅನಿತು ಭರಿತಳೆ ಭಾರತಿ?
ನಾವ್ ಧನ್ಯರೇ! ಧನ್ಯರೇ!! (ಉಬ್ಬಿನಿಂ ಕೂಗುವನು)

**ಋಷಿ**– ಅಹುದು ಮಗನೇ ಅಹುದು.
ಎಷ್ಟು ಯೋಗದ ಫಲಗಳಿಲ್ಲ

ನಿಮ್ಮ ಕೈಗಳಿಗಿತ್ತಿಹೆವು.
ಕಾಯ್ದುಕೊಳ್ಳಿರೈ, ಬಲ್ಪಿಂದ ಬಾಳಿರೈ
ಅದುವೆ ಎಮಗೆ ಸಂತಸ.
ಅದುವೆ ನಿಮ್ಮ ನೀಡ ಕೃತಜ್ಞತೆ.
ವಿಶಾಲ ಮನದಿಂದ ಕಾಣಿರೈ
ಕುಹಕವಿಲ್ಲದೆ ಸತ್ಯವ ಕಾಯಿರೈ
ಆದರಿಂ ಅರಿವು ಪುಟ್ಟುವುದು

ಶಕ್ತಿಯುಕ್ತಿಗಳ ಅರಿವಾಗಿ
ಛತ್ರ ಚಾಮರಗಳ ನೆರಳಾಗಿ
ಒವರ ಬಾಧೆಗಳ ಹೊರಗಾಗಿ
ಹೊನ್ನ ಹೊಳೆಗಳ ಹಾದು
ಭಕ್ತಿ ಭಾಗ್ಯವ ತೇದು
ಮುಕ್ತಿಮತಗಳ ಕಂಡು
ಆತ್ಮಶಕ್ತಿಯ ಉಂಡು

ಬಯಲು ಬೆಟ್ಟಗಳ
ಹೊಳಲು ಹಳ್ಳಿಗಳ
ಅರಮನೆಯ ಕಿರಿಮನೆಯ
ಹೂದೋಟ ನಿಡುಗಾಡ

ಹಲವೆಡೆ ಹರಿದಾಡಿ
ಕಾಲ ಕಾಲವ ತುಳಿದು
ಸಿರಿ ತಾಯ ರೂಪವನು ಕಾಣಿರೈ.

**ದಾರ್ಶಿಕ—** ಪ್ರಸಾದಂ.

**ಋಷಿ** – ಇದೋ, ಸಂದೇಶ ನಿನಗಿದು.
ನಿನ್ನವರಸರುವಿಂದ
ನಿನ್ನ ನೀಸರಿಯುವೆ.
ಸತ್ತ ಶಕ್ತಿಯೆ ಎದ್ದು
ಮತ್ತೆ ಭಾವವ ಮೆದ್ದು
ನೀನೆ ನೀನಾಗಿ ನಿಲುವೆ.

**ವಾರ್ಶಿಕ**–
ನಿಮ್ಮ ಅಮರ ನುಡಿಯಿಂದ, ಅಮರರಾಗುವೆವು.

**ಋಷಿ** –
ಎಮ್ಮ ಮುಮುಕ್ಷುಗಳಲ್ಲವೆ ನೀವ್
ನಿಮ್ಮ ಅಮರ ಬಾಳೇ ಎಮಗೆ ಸಂತಸ.
ನಹಿ ಜ್ಞಾನೇನ ಸದೃಶಂ.

**ವಾರ್ಶಿಕ** –
ಜೀವಕೊಟ್ಟು ಕಾಪಿಟ್ಟಿಹಿರಿ,
ನಮಿಸುವೆನು ಋಷಿವರ್ಯ (ನಮಸ್ಕಾರಮಾಡುವನು.)

**ಋಷಿ** – ದೀರ್ಘಾಯುಃ (ಮರೆಯಾಗುವರು)

**ವಾರ್ಶಿಕ** – (ಎದ್ದುನೋಡಿ)
ಕಾಣದಾದರ್, ಋಷಿವರ್ಯ !
ಎಲ್ಲಿ ಪೋಗಿಹರೋ (ಹೊರಡುವನು)



## ದೃಶ್ಯ ೨.

(ಸುಂದರವಾದ ಕೊಳಗಳಿಂದಲೂ ಫಲಭರಿತ ವೃಕ್ಷಗಳಿಂದಲೂ ಕಂಗೊಳಿಸುವ ಸ್ಥಳಕ್ಕೆ ದಾರ್ಶನಿಕನ ಪ್ರವೇಶ.)

**ದಾರ್ಶನಿಕ –**

ಋಷಿವರ್ಯರೆಲ್ಲಿ ಅಡಗಿದರೊ ಕಾಣೆ.
ಮುಮುಕ್ಷುಗಳು ನಾವೆಂದು ಹೇಳಿದರು.
ಸಂದೇಶ ಬೆಳಕ ನೀಡಿದರು
ಎನಿತು ವಾತ್ಸಲ್ಯವೋ ಋಷಿವರ್ಯಗೆ !

(ಸುತ್ತಲೂ ನೋಡಿ)

ಆವ ಪುಣ್ಯದ ಬೀಡಿದು ? ಸಗ್ಗವೆ ?
ಸತ್ಯಲೋಕವೆ ? ಶಿವನಾಲಯುವೆ ?

(ಮರ ಕೊಳಗಳ ಬಳಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು, ಆಚಾರ್ಯರು ಕಾಣುವರು.)

ಅದೋ, ಆರಾರೊ ...

ಧವಳದುತ್ತುಂಗ ಗಿರಿರಾಜನೀಕ್ಷೆಯಲಿ
ಸುಧೆಯ ಸಿಂಧುವಿನ ತಂಬೆಲರ ಬಳಸಿನಲಿ,
ಪಲ್ಲವಿತ ವಸಂತ ಮಧುಲಹರಿ ಪೊರಳಲಿ,
ದಳದಳದಿ ಮುಂಬಿದನಿಯೇಳ್ವ ಪುಷ್ಪ
ಸಂಮೋಹದಿ ಮೆರವಮರ ಪ್ರಕೃತಿಯು,
ಬಿಸಿಲ ಬೆಳದಿಂಗಳಂಗಳದಿ ಕಂಗೊಳಿಸಿ
ಪ್ರೇಮದಂತರ್ದೃಷ್ಟಿಕೋನದಿ, ನವೋದಯದಿ
ಮೆರೆಯುತಿಹರಿವರ್ ಮನುಜರೋ? ದಿವಿಜರೋ?

(ಹತ್ತಿರಬರುವನು)

ಆರಿವರ್ ? ಏನನ್ನೋ ಪಠಿಸುತಿಹರ್.

ಆಲಿಸುವೆ.

ನಮಿಸುವೆನು ಆಚಾರ್ಯ. (ಕೈಮುಗಿಯುವನು.)

**ಆಚಾರ್ಯ** –

ಶುಭವಕ್ಕೆ – ಕೂಡುವುದು ಈ ಪೀಠವಿ.
ಈ ಎಡೆಗೆ ನೀ ಬರಲು ಕಾರಣವೇನ್ ?

**ದಾರ್ಶಿಕ** –

ಕಾರಣವೇನು, ಬಾಯಾರಿದೊಡೆ ನೀರನರಸುವಂತೆ ಬಂದಿಹೆನು.
ಆಚಾರ್ಯ, ಆವ ಆಶ್ರಮವಿದು?

**ಆಚಾರ್ಯ** – ಭಗವನ್ ಬುದ್ಧದೇವನಾಶ್ರಮ.

**ದಾರ್ಶಿಕ** –

ಬುದ್ಧದೇವ! ನವೀನ ಮತಾಚಾರ್ಯ!
ಲೋಕ ಕಲ್ಯಾಣ ಬಗೆದ ಪ್ರಭು!
ಅವರ ಆಶ್ರಮವೆ?
ಭಾಗ್ಯೋದಯವಾದಂತಾಯಿತು
ಈ ಬೀಡಿಂಗೆ ಬಂದುದು.
ಆಚಾರ್ಯ, ಅದೇಂ ನೀವ್ ಪಠಿಸುತಿಹುದು.

**ಆಚಾರ್ಯ** – ಭೂ ಶಾಸ್ತ್ರ

**ದಾರ್ಶಿಕ** – ಎನಿತು ಶಾಸ್ತ್ರಗಳ ಪಠಿಸಿಹಿರಿ.

**ಆಚಾರ್ಯ** — ಅಲ್ಪಮೇ—
ಯೋಗ, ಆಯು, ಮನೋ, ಗಣಿತ, ಭೌತ
ಜೀವ ಶಾಸ್ತ್ರಂಗಳ.

**ದಾರ್ಶಿಕ**—
ಅಬ್ಬ !
ಅನಿತು ಪಠಿಸಿಹರಾ
(ಕೈತೋರಿ) ಅವರೇನ ಮಾಡುತ್ತಿಹರ್?

**ಆಚಾರ್ಯ** —
ಜ್ಯೋತಿಷವ ಕಲಿಯುತಿಹರು.
ಗ್ರಹತಾರೆಯೋಡಾಟ ನೋಡುತಿಹರು.

**ದಾರ್ಶಿಕ** — ಇವರ್ ?

**ಆಚಾರ್ಯ** — ಅಣುಶಾಸ್ತ್ರ ಕಲಿಯುತಿಹರು.

**ದಾರ್ಶಿಕ** — ಅವರ್ ?

**ಆಚಾರ್ಯ** — ಶಿಲ್ಪ ಶಾಸ್ತ್ರ.

**ದಾರ್ಶಿಕ** — ಆ ಹೆಂಗಳ್ ?

**ಆಚಾರ್ಯ** — ಚಿತ್ರಶಾಸ್ತ್ರ—ಗೃಹಶಾಸ್ತ್ರ.

**ದಾರ್ಶಿಕ** — ಆ ಕೋಡ ತುದಿಯಲಿ ಕಾಣ್ಬ ಅವರ್ ?

**ಆಚಾರ್ಯ** — ಶಬ್ದಶಾಸ್ತ್ರ—ಕಿರಣಶಾಸ್ತ್ರ.

**ದಾರ್ಶಿಕ**— ಆಯ್ಯಾಯ್ತು ! ಇನಿತು ಶಾಸ್ತ್ರಗಳೆನಿತು
ಕಲಿಯುವುದು ! ಆಚಾರ್ಯ !

**ಆಚಾರ್ಯ** ..

ಸದಾಚಾರ, ಏಕನಿಷ್ಟೆ, ಗುರುಭಕ್ತಿ ಇರುವಲ್ಲಿ
ಶಾಸ್ತ್ರಂಗಳೇಂ ಆಗಸದ ಪೂವೆ!

**ದಾರ್ಶಿಕ** – ಸದಾಚಾರ, ಏಕನಿಷ್ಟೆ, ಏತರಿಂ ಬಪ್ಪುದು?

**ಆಚಾರ್ಯ** – ದೃಢನಂಬಿಗೆಯಿಂ

**ದಾರ್ಶಿಕ** – ದೃಢನಂಬಿಗೆಯುದು?

**ಆಚಾರ್ಯ** – ವಿವೇಚಿತ ಭಾವ ಸಿದ್ಧಿಯಿಂ

**ದಾರ್ಶಿಕ** –

ಅನಿತು ತೊಡರೇಕೆ
ಬರೆದು ಓದಿದೊಡೆ, ಶಾಸ್ತ್ರಂಗಳೇಂ ಬಾರವೆ?

**ಆಚಾರ್ಯ** –

ಅಪ್ಪುದು. ಸಗ್ಗವೇರಲು ಹಗ್ಗದೇಣಿಯಿದ್ದಂತೆ!

**ದಾರ್ಶಿಕ** – ಅದೊಡೇಂ, ಫಲಿಸವೆ?

**ಆಚಾರ್ಯ** – ಉಂಟೆ,

ಅಧ್ಯಯನ--ಅನುಷ್ಠಾನ ಪಕ್ಷಿರೆಕ್ಕೆಗಳಿದ್ದಂತೆ,
ಅದರಿಂ ಫಲಿತವೃಕ್ಷಗಳ ಸೇರಿ, ಸಿಹಿಯುಸವಿಯಲುಂಟು.

**ದಾರ್ಶಿಕ** – ಎಷ್ಟು ನಾಟಲಿ ಶಾಸ್ತ್ರಂಗಳ ಕಲಿತಿಹರು

**ಆಚಾರ್ಯ** – ಅಹುದು, ಕೇಳಿಹೆವು.

ಸಾರವಿಲ್ಲದ ವಿದ್ಯೆ
ಗುರಿಯಿಲ್ಲದ ಬಾಳ ಕಲಿತಿಹರೆಂದು.

**ದಾರ್ಶಿಕ –**

ಹಾಗುಂಟೆ ಆಚಾರ್ಯ !

ನವೀನ ಶಿಕ್ಷಣದಿಂ ನವೀನ ಶಾಸ್ತ್ರಂಗಳಿಂ
ಹೊಸ ಬಾಳ ಬೆಳಗಲೆಣಿಸಿಹೆವು
ಮನುಜನಾಶೋತ್ತರವ ಗುರಿಮಾಡಿ
ಬಗೆ ಬಗೆಯ ವಿದ್ಯೆಗಳ ಬೆಳೆಸಿಹೆವು.

**ಆಚಾರ್ಯ –** ಮನುಜ ಆಶೆಗಳಿಗೇಂ ಸೀಮೆಯುಂಟೆ
ಅದ ಗುರಿ ಮಾಡಿ ಬೆಳೆವ ವಿದ್ಯೆಯೇಂ ವಿದ್ಯೆಯೇ
ಆಗಸಕೆ ಬಲೆಯೊಡ್ಡಿ ತಾರೆಗಳ ಹಿಡಿವಂತೆ.

**ದಾರ್ಶಿಕ –**

ಕಾಲವನಿತರಲಿ ನವಶಿಕ್ಷಣದಿಂ ನವೀನರಾಗುಹೆವು.
ವಾಯು ಭೂಜಲದಲ್ಲಿ ಚರಿಸಿಹೆವು
ಪ್ರಕೃತಿಯ ಪರಿಪರಿಯ ಮೂಲಗಳ ಕಂಡಿಹೆವು
ಗ್ರಹತಾರೆಯೋಡಾಟ ಗುರ್ತಿಸಿಹೆವು
ಅದ್ಭುತದ ಶಕ್ತಿಗಳ ಹಿಡಿದಿಹೆವು
ಅವನೆಲ್ಲ ಮನುಜಸೇವೆಗೆ ಬಳಸಿಹೆವು.
ಬೆಳಕ ಭೇದಿಸಿ, ನೀರನೊಡೆದು ಬಂದಿಹೆವು.
ಚಂದ್ರಲೋಕವ ಹೊಗಲು ಹೊಂಚು ಮಾಡುತಿಹೆವು.
ಏನುಂಟು ಏನಿಲ್ಲ – ಆಚಾರ್ಯ
ಮಂತ್ರಗಳ ಹಾಡುತ್ತ ಕುಳಿತಿಹೆವೆ
ಯಂತ್ರಗಳ ಸೃಷ್ಟಿಸಿ ಕಟ್ಟೆಹೆವು
ಸುಖದ ಸಾಮ್ರಾಜ್ಯವ.

**ಆಚಾರ್ಯ–** ಏನ ಮಾಡಿದರೇನು ಮನುಜ ಮುಂಬರಿದನೇ ?

**ದಾರ್ಶನಿಕ** — ಮುಂಬರಿವ.

ಭವಿಷ್ಯ ನೋಟದಲಿ ಕಾಣುತಲಿಹೆವು
ಸುಖ ಸಾಮ್ರಾಜ್ಯದ ಉನ್ನತ ಶಿಖರವ.
ಹೆಚ್ಚೇನು ಜೀವಶಕ್ತಿಯನೇ ಸೃಷ್ಟಿಸುವೆವು
ಆ ದೇವಗೋವನ ಚಿಂತೆ ಬಿಡುವೆವು.

**ಆಚಾರ್ಯ** —

ಸಾವೆಂಬುದನರಿಯದಿಹ ನೀವ್
ಜೀವ ಶಕ್ತಿಯ ಸೃಷ್ಟಿಸುವಿರಾ ?
ಮರುಳಾಗಿ ಹೋಗಿಹಿರಿ
ಜೇಂಟಿಯಾಡಲು ಹೋಗಿ
ಮಿಂಗಕೇ ಜೇಂಟಿಯಾದಂತೆ
ಮೃತ್ಯುಮುಖದಲೋಲಾಡುತಿಹರಿ.

**ದಾರ್ಶನಿಕ** —

ಆಚಾರ್ಯ,
ಅಂತಿಮ, ಸುಖವ ಸಾಧಿಪ ಬಗೆಯೆಂತು ?
ಎಮ್ಮ ಶಾಸ್ತ್ರಂಗಳ್ ಅದ ತೋರುವುವು.
ನಿತ್ಯಜೀವನದಿ ಉತ್ತಮ ಸುಖವ ಕೊಡುವುವು.
ಮಾನವನ ಸುಖ–ದುಃಖಗಳ ಕೊನೆಯ ಕಂಡು.
ಅವರ ಪರಿಗಳ ಬಿಡಿಸಿ, ಅದೆಂತಪ್ಪುದನೆ ನುಡಿದು,
ಕಾಲದೇಶಗಳ ಮನದಲಿರಿಸಿ,
ಅವನಾಯುವ ವಿಭಾಗಿಸಿ,
ನಡೆನುಡಿಗಳ ನಿರ್ಧರಿಸಿ,
ಬಾಳ ಹಸಗ್ಗೆ ನಾಚಾರಗಳ ನಿರ್ಮಿಸಿ

ಜೀವನದ ಗುರಿ ಏನೆಂಬುದನರುಹಿ,
ಅವರೆಡೆಗೆ ಸುಖದ ಸೋಪಾನಮಾಡಿ
‘ಅಡಿಯಿಡು’ ಎಂದೆನುತ ಘೋಷಿಪ್ಪುದು.

ಇದರಂಕೆಯುಲಿವಾಳ್ವ ಶಿಕ್ಷಣವೆ ಸುಶಿಕ್ಷಣ.
ಅದುವೆ ಸುಖದ ಸಾಧಿಪ ದಾರಿ.

**ವಾರ್ಶಿಕೆ** —
(ದೂರದಲ್ಲಿ ಬರುತ್ತಿರುವ ಬಾಲಕನನ್ನು ಕಂಡು)
ಆಚಾರ್ಯ ಆರವನ್ ?

**ಆಚಾರ್ಯ** — ಈ ಆಶ್ರಮದ ವಿದ್ಯಾರ್ಥಿ.

**ವಾರ್ಶಿಕ** — ಓಹೋ! ವಿದ್ಯಾರ್ಥಿ!!

ಹೊಳೆದು ಕಾಣುವ ದಿಟ್ಟತನುವಲಿ
ಸೆಳೆದು ಬಿಗಿಸುವ ಮೋಹನಡಗಿರೆ,
ಬೆಳೆದು ಬಲಿತಿಹ ಕುಣಿವಪುಗಳ
ತೊಳಪಿನ ತೋಳ ತೂಗುತ;
ವಿಸ್ತೀರ್ಣದಿ ಹರಡಿದೆದೆಯಲಿ
ಅರುಣ ಮುಂಗುರುಳ ಹೊರಳಲಿ-
ಕರುಣಕಾಂತಿಯ ನೀಲಕಂಗಳ
ಚಲನ ಚೆಲ್ಲುತ ಸುತ್ತವಳಯದಲಿ-
ಎಳೆದು ಬಿಗಿಸಿಹ ವೀರಗಚ್ಚೆಯ-
ಕಲಿ ಕಂಠೀರವ ಸೊಂಟದಚ್ಚರಿಯ.
ಅಚಲ ಸದ್ಬ್ರಹ್ಮಚರ್ಯ ತೇಜದಿ
ದಿಕ್ಕದಣಿಸುವ ನಡೆವ ಸೊಬಗಿಂದ-
ಒಳಗೆ ಬೆಳಕಿಂದ ಹೊಮ್ಮುವ ಸಂತಸದ

ಪೊಗ್ಗರಳುವುದು ತುಷ್ಟಿಯಿಂದ.
ಬಾಳ ತೊಡರೆಟಕಿಸುವ ಕಣ್ಣಾಮುಚಾಲೆ.
ಸದ್ಗುಣದ ಸಿರಿಯೊಂದೆ ಬಾಳ ಗುರಿಯಿಂದು,
ಶಾಂತಿ ಏಕತೆಯ ಗೊಂಚಲಿಯುಂಡದಿ,
ಜೀವನ ವನದಿ ಹಾರಾಡಲೆದ್ದ,
ಹೊಸ ಬಗೆಯ ಉಸಿರ ನಾದದಿ
ಬರುವ ಬಾಲನ ಕಾಂಬ ಕಣ್ಗೆ ಹಬ್ಬಂ!

**ಆಚಾರ್ಯ** –

ಇವನ್ ಮುಂಬರುವ ಜನಪದದ ಜೀವ ಚಿತ್ರ
ಈ ರಮ್ಯಪ್ರಕೃತಿಯಾಶ್ರಮದ ಸುಕ್ಷೇತ್ರದಲಿ
ಸುಶಿಕ್ಷಣನೇಗಿಲಿಂ ಮನ ಮಣ್ಣಿಯ ಹದಗೊಂಡಿ,
ಬಗೆಬಗೆಯ ಸಚ್ಛಾಸ್ತ್ರ ಸಾರಗಳ ಬಿಂದು,
ಸುಜ್ಞಾನಧಾರೆಯ ನೀರ ನೆರೆಸಿಂಚಿ,
ಅನುಷ್ಠಾನ ತಂಗಾಳಿಬೆಳಕನಾನ್ತು,
ಮನುಜಬಾಳಿನ ಅಂತರಾರ್ಥದ ಶಾಖೆಗಳೊಡನೆ
ವಿಶಾಲ ಮನವೆಂಬ ಆಗಸದಿ ತಲೆಯೆತ್ತಿನಿಂದು
ತನ್ನ ಕಾಣ್ಬರಿಗೆ ಸೆಳೆಸಂತಸವನೀವ
ನಾಡಕಲ್ಪವೃಕ್ಷವಿದು.

**ದಾಶಿಕ** –

ಈ ಕಲ್ಪವೃಕ್ಷಗಳ ಸೃಷ್ಟಿಪ
ನಿಮ್ಮ ಶಿಲ್ಪಮದು ಸಾಮಾನ್ಯವೆ!

**ಆಚಾರ್ಯ** – ಗುರುಕೃಪೆಯಿದು.

**ದಾಶಿಕ** – ಆಚಾರ್ಯ, ಅಲ್ಲಿ ಕಾಂಬುದೇನ ?

**ಆಚಾರ್ಯ** – ಹೆಂಗಳ ಚಿತ್ರಶಾಲೆ

**ದಾರ್ಶಿಕ** - ನೋಡಬಹುದೇನು?

**ಆಚಾರ್ಯ** – ಅಸ್ತು.

ಸುಖಿನೋಭವಂತು

**ದಾರ್ಶಿಕ** -- ನಮಿಸುವೆನು. (ಕೈಮುಗಿದು ಹೊರಡುವನು.)



# ದೃಶ್ಯ ೩

(ಪಾರ್ಥಿಕನು ಬುದ್ಧಾಶ್ರಮದ ಹೆಣ್ಣುಮಕ್ಕಳ ಚಿತ್ರಶಾಲೆ ಬಳಿ ನಿಂತಿರುವನು.)

**ಪಾರ್ಥಿಕ** –

ಓಹೋ, ಈ ಪೆಂಗಳ್ ಎನಿತು ಶೋಭಿಸರ್
ಆಡುತಿಹುದೆಂತು ?
ಕಡಿದ ಪಾಲುಗಲ್ಲಿನ ಗೊಂಬೆಯಂದದಿ
ದೃಢ ತನುವ್ರೊಳು ಕಾಣ್ವಕಾಂತಿಯಿಂ.
ಎದ್ದು ಕಾಣುವ ಕಣ್ಣರೇಖೆಯಿಂ,
ನೀಳವಾಗಿಹ ತೋಳ ಬಳ್ಳಿಯಿಂ,
ಕದ್ದು ನೋಡುವ ಎದೆ ಕುಂಚ ಕುಲಕಿಂ
ಇಂಬಿಗರಸುವ ಕೆನ್ನಧರವದೇಕಿರೆ
ತುಂಬುಕೊರಲು ಬಳಿಕೆ ಸರಿದಿರೆ
ಕತ್ತುರಿಯ ಹಣೆಯಲಿ ಮುತ್ತಕಿವಿಯಲಿ
ಜಗಜಳಿಸಿ ಮಿರುಗುವ ಸೀರುಡೆಯಲಿ
ಚಂದನದ ಗಂಧವಿರೆ ಸೆಳ್ಳಗುರ್ಗಳಲಿ
ತುಂಬುಜವ್ವನಕೆ ಸರಿಲಜ್ಜೆ ಬೆರೆತಿರೆ
ಚೆಲ್ಲಿದ ಚೇತನದಂದದಿ ಆಡುತಿಹರ್.

(ಆಡುತ್ತಿರುವ ಹೆಣ್ಣುಮಕ್ಕಳು ಪಾರ್ಥಿಕನನ್ನು ನೋಡಿ)

**೧ ನೇ ಹೆಣ್ಣು** – ಅಕ್ಕ, ಆರಿವರ್ ?

**೨ ನೇ ಹೆಣ್ಣು** – ದೂರದಿಂ ಬಂದಂತೆ ಕಾಣುವರ್.

**೧ ನೇ ಹೆಣ್ಣು –**

ಆಗಲಿ, ಕುಶಲವ ಕೇಳುವೆ (ಹತ್ತಿರಹೋಗಿ)
ಆರ್ಯ, ಎಲ್ಲಿಂದ ಬಂದಿಹಿರಿ ? ಕ್ಷೇಮವೇ ?

**೨ ನೇ ಹೆಣ್ಣು –**

ಆರ್ಯ, ಅರ್ಘ್ಯಪಾದ್ಯಗಳ ನೀಡುವೆವು
ನಮ್ಮ ಬೀಡಿಂಗೆ ದಯಮಾಡಿ. (ಎಲ್ಲರೂ ಹೋಗುವರು)

(ಚಿತ್ರಶಾಲೆಯ ಸಭಾಂಗಣದಲ್ಲಿ ಉಪಚರಿಸಲ್ಪಟ್ಟ ದಾರ್ಶಿಕನು ಕುಳಿತಿರುವನು. ಹೆಣ್ಣುಮಕ್ಕಳು ನಿಂತಿರುವರು.)

**೧ನೇ ಹೆಣ್ಣು –**

ಆರ್ಯ, ಬಹುದೂರ ಬಂದು, ದಣಿದಂತೆ ತೋರುವುದು.

**ದಾರ್ಶಿಕ –**

ನಿಮ್ಮ ತನಿ ನುಡಿಯಿಂದಲೇ ಎನ್ನ ದಣಿವಾರಿಹುದು
ಇನ್ನುಪಚಾರಗಳ ಕೊಂಡವೋಲಿಹುದೆ ?
ಈ ಹಿಮಕರಗಿ ಹರಿವ ನೀರನೀಂಟಿ
ಸವಿವ ಸಿಹಿಫಲದ ಸವಿ–ಹೊಸರಸವಾಗಿ
ಹೊಸುಸಿರಿಂದ–ಹೊಸ ಜೀವವೆನಿಸುವುದು
ಈ ಎಡೆಗಡಿಯಿಡುವ ನೇಹಿಗಗೆ !

**೧ನೇ ಹೆಣ್ಣು –** ಆವ ನಾಡಿಂದ ಬಂದಿಹಿರಿ ? ಆರ್ಯ,

**ದಾರ್ಶಿಕ –** ಬಹುದೂರ ನಾಡದು.

**೧ನೇ ಹೆಣ್ಣು –** ಆವುದದು ?

**ದಾರ್ಶಿಕ –** ಹೇಳಬಾರದು.

೨ನೇ ಹೆಣ್ಣು – ಕೇಳ ಬಾರದೇ ?

ದಾರ್ಶಿಕ – ಕೇಳುವುದಕೆ ಹಕ್ಕುಂಟು
ಹೇಳುವುದಕೆ ಬಾಯಿಲ್ಲ.

೨ನೇ ಹೆಣ್ಣು – ಹೆಸರ ಹೇಳಿದೊಡೆ ತಪ್ಪೇನು ?

ದಾರ್ಶಿಕ – ತಪ್ಪಿಲ್ಲ.

೧ನೇ ಹೆಣ್ಣು -- ಆದೊಡೇಂ, ಕಳ್ಳರೋ, ತುಂಟರೋ
ಕಟ್ಟಿದ ನಾಡೆ ಅದು ?

ದಾರ್ಶಿಕ – (ಉದ್ರೇಕದಿಂದ) ಉಂಟುಂಟೆ ?

ವೇದಗಳ ಬೀಡದು
ಋಷಿವರರು ಯೋಗದಲಿ ಕಟ್ಟಿದ ನಾಡದು
ವೀರರುದಿಸಿಹ, ಧೀರರೆದ್ದಿಹ ನಾಡು
ದೇವಲೋಕಕು ಮಿಗಿಲಾದ ನಾಡು

೧ನೇ ಹೆಣ್ಣು – (ಯೋಚಿಸಿ) ಅದೇಂ ಭರತಖಂಡವೋ ?

ದಾರ್ಶಿಕ – (ತಗ್ಗುದನಿಯಿಂದ) ಅಹುದು.

೧ನೇ ಹೆಣ್ಣು -- ಓ ! ಎಮ್ಮ ಸೋದರರೆ ನೀವ್
ವಂದಿಸುವೆವು ಆರ್ಯ (ಎಲ್ಲರೂ ನಮಸ್ಕರಿಸಿ ನಿಲ್ಲುವರು)

ದಾರ್ಶಿಕ– ಅಚ್ಚರಿಯಾಗಿಹುದು. ಇದೇಂ ಆಶ್ರಮದ
ಹೆಂಗಳ್ ನೀವ್ ಸೋದರಿಯರೆ ?

೧ನೇ ಹೆಣ್ಣು -- ಅಹುದು ಆರ್ಯ.
ಭರತ ದೇಶದ ಹೆಸರ ಕೇಳುವುದೆ ಪಾವಿತ್ರ್ಯ
ಇನ್ನು ಅದರಿಂ ಬಂದವರ ನೋಡುವುದಿನ್ನೆನಿತೋ

**೨ನೇ ಹೆಣ್ಣು** – ಅಲ್ಲಿ ನೆಲಸಿಹರೆಲ್ಲ ಸೋದರ ಬಳಗ
ಅವರೆಲ್ಲ ನಮ್ಮ. (ಆದರ್ಶ!)

**ದಾರ್ಶಿಕ** – ನಿಮ್ಮ ನಾಡಾವುದು ?

**೧ನೇ ಹೆಣ್ಣು** -- ಇದೇ ಈ ಹಸುರಾಶಿಮಧ್ಯದಲಿ ಬೆಳೆದಿಹೆವು

**ದಾರ್ಶಿಕ** -- ಈ ಆಶ್ರಮಕೆ ಬರುವ ಮುನ್ನ ನಿಮ್ಮನಾಡು?

**೧ನೇ ಹೆಣ್ಣು** -- ಈ ಗಿರಿ ಕಾನನವೆ.

**ದಾರ್ಶಿಕ** -- ಗಿರಿಕಾನನವೇ ?
ಕಾಡಮನುಜರಾಗಿರ್ದಿರಾ !

**೨ನೇ ಹೆಣ್ಣು** -- ಕಾಡಮನುಜರಲ್ಲ ! ಕಾಡ ಮರ ಬಳ್ಳಿ
ಖಗಮೃಗಗಳಾಗಿ ಸಂಚರಿಸುತಿದ್ದೆವು.

**ದಾರ್ಶಿಕ** –
(ಬೆಚ್ಚಿಬಿದ್ದು) ಅಂತಾದೊಡೆ ನೀವ್ ಭೂತಂಗಳೆ ? !

**೧ನೇ ಹೆಣ್ಣು** –
ಭಯಬೇಡ ಆರ್ಯ, ಭೂತಗೀತಗಳಲ್ಲ
ಖಗಮೃಗ ಮರಬಳ್ಳಿಯಾಗಿರ್ದು
ಆ ಗುರುದೇವನ ಕೃಪೆಯಿಂದ
ಜಡವ ನೀಗಿ ಮನುಜರಾಗಿಹೆವು.

**ದಾರ್ಶಿಕ** –
ಇಂದ್ರಜಾಲವ ಮಾಡುವ ಆರ್ ಅವನ್ ಗುರುದೇವ

**೨ನೇ ಹೆಣ್ಣು** – ಇಂದ್ರಜಾಲದ ಗುರುವಲ್ಲ
ಲೋಕ ಕಲ್ಯಾಣ ಬಗೆದು ತನ್ನ ಸುಖವ ಬಿಸುಟು
ಬವಣೆಗೊಳುವ ಮಾನವರ ಅಮರರಾಗಿಮಾಡಿದ
ಭಗವಾನ್ ಬುದ್ಧದೇವ.

**ದಾರ್ಶಿಕ** – ಬುದ್ಧದೇವ! ಆಚಾರ್ಯರ್ ಪೇಳಿದರ್
ಇದ 'ಬುದ್ಧಾಶ್ರಮ'ವೆಂದು.
ಆದೊಡೆ, ಮರಬಳ್ಳಿ ಮನುಜರಾದುದು
ಅಮಾನುಷ!

**೧ನೇ ಹೆಣ್ಣು** -- ಆರ್ಯ!
ಅಮಾನುಷವೇನ್, ಪೇಳುವೆನು ಕೇಳ್
ನಾವೆಲ್ಲ ಈ ವನದಿ ಚಂದನ, ಶ್ರೀಗಂಧ
ಮರಗಳಾಗಿರ್ದೆವು
ಈ ಬಾಲರೆಲ್ಲ ಗಿಳಿ ಕೋಕಿ ಸಾರಂಗ ಹುಲಿಗಳಾಗಿರ್ದರ್
ಇಂತಿರಲು, ಒಂದು ಹುಣ್ಣಿಮೆಯ ನಡುರಾತ್ರಿ
ಬುದ್ಧದೇವನಿಲ್ಲಿಗೈತಂದೆಡೆದಾಡುತಿರ್ದನ್.
ಆಗಾಗ ಏನನೋ ನಿಟ್ಟುಸಿರಿಂದ ಗೊಣಗುತ,
ಕೈಬೆರಳ ಕೊಡವುತ, ನಿಂತಲ್ಲಿ ನಿಲ್ಲದೆ,
ಕೂತಲ್ಲಿ ಕೂರದೆ ಅಡ್ಡಾಡುತಿರ್ದನ್.

**ದಾರ್ಶಿಕ** -- ಏನೆಂದು ಗೊಣಗುತಿರ್ದನ್ ?

**೧ನೇ ಹೆಣ್ಣು** -- ಏನೆಂದೆ;
'ವರುಷ ಹನ್ನೆರಡು ತಪವಗೈದು ಉಪವಾಸವಮಾಡಿ
ದೇಹ ಶೋಷಣೆಯಿಂ ಕಂಡ ತತ್ವಗಳ
ಎಳೆಯರಿಗೆ ಸಕ್ಕರೆ ಹಾಲ ಕೊಡುವುದದಿ

ಬೋಧಿಸಿದೊಡಂ, ಕೃತಜ್ಞತೆಯು
ನೀಡದಾದರ್ ಸಾಫಲ್ಯ ಪೊಂದದಾದರ್
ಕಡೆಗೆ ನಮ್ಮ ತತ್ವಂಗಳ ನೂಂಕಿ ಬಿಟ್ಟಿರ್.
ನಾನೇಕೆ ಆ ಭರತಭೂಮಿಯಲಿ ಅವತರಿಸಿದೆನೋ?
ಎಂದು ಏನೇನನೋ ಆಡುತಿರ್ದರ್

**ದಾರ್ಶಿಕ** -- [ನಿಟ್ಟುಸಿರಿಂದ] ಹೂಂ!

**೧ನೇ ಹೆಣ್ಣು** — ಇಂತು ಕೆಲದಿನದ ನೂಂಕೆ. ಅನಂತರದಿ
ಒಂದಿರುಳು ಹಾಲಿರೆಚಿದ ತಿಂಗಳ ಬೆಳಕಲಿ
ಕೋಡು ಬಂಡೆಯನೇರಿ ಸುತ್ತಸೃಷ್ಟಿಯ ಚೆಲ್ವಿ
ಏನನೋ ಮನದಲಿ ನಿರ್ಧರಿಸಿ, ತನ್ನ
ಉಪದೇಶ ವಾಣಿಗಳ ಬೀರಲುಪಕ್ರಮಿಸಿದನ್.
ಅಂತು ಉಪದೇಶವಾಗುತಿರೆ, ಮಂದ
—ಮಾರುತದಿಂದ ಆ ರಸವಾಣಿಗಳ್ ಎಮ್ಮ,
ಮೇಲ್ಬಾಯ್ತು
ದಿನದಿನಕು ಬಲದಿಳಿದು, ತಿಳಿಭಾವ ಆತ್ಮ ಬುದ್ಧಿಗಳು
ಬೆಳೆದು, ಮನುಜಾಕೃತಿಯಾಗಿ ಹೊರಬಂದೆವು.
ಅಂದಿನಿಂ ಗುರುದೇವ ಎಮ್ಮ ಸರ್ವಸ್ವವೆಂದೆಣಿಸಿಹೆವು.
ಅವನ ಕೃಪೆಯಿಂದ ಬುದ್ಧ್ಯಾತ್ಮದಿ ಶುದ್ಧರಾಗಿಹೆವು.

**ದಾರ್ಶಿಕ** — ಮರಬಳ್ಳಿ ಮಾನವರಾದಿರಾ! ಎನಿತು ಅಚ್ಚರಿ
ಆ ಗುರುದೇವನ ತತ್ವಗಳ ಮಹತ್ತರವೆನಿತೋ

**೨ನೇ ಹೆಣ್ಣು** — ಗುರುದೇವ ನಿಮ್ಮನಾಪಲವತರಿಸಿ
ಮನುಜನಾಗುವನು ಅಲ್ಲೆ, ಕಳೆದನಲ್ಲವೆ?

**ದಾರ್ಶಿಕ** – ಅಹುದು

**೨ನೇ ಹೆಣ್ಣು** –

ಭಾಗ್ಯಶಾಲಿಗಳ್ ಭರತಖಂಡದಿ ಜನ್ಮವೆತ್ತಿದವರ್
ಗುರುದೇವ ನಿಮ್ಮನೆಸಿತು ಪಾವನ ಗೈದಿಹನೋ
ದಿವಿಜರಿಗು ಮಿಗಿಲಾಗಿ ದೇವ ಲೋಕವ ಮಾಡಿರಬೇಕು.

**ದಾರ್ಶಿಕ** – ತಾಯೆ,

ದಿವಿಜರಿಗು ಮಿಗಿಲಾವ ತತ್ವಗಳ
ಗುರುದೇವನರುಹಿದನ್
ಆದೊಡೇಂ, ಮರಬಳ್ಳಿಗಿರ್ಪ ಶ್ರದ್ಧೆ
ಎಮಗಿಲ್ಲವಾಯ್ತು.
ಮತ್ತ ಮದದಿಂದ ಹಿತ್ತಿಲಗಿಡವೆಂದು
ನೂಂಕಿದೆವು ಆಕಡೆಗೆ
ಅಮರ್ದಲೀಸಲೆಳಸಿ ಬಚ್ಚಲಸೇರ್ದಂತಾಯ್ತು

**೧ನೇ ಹೆಣ್ಣು** – ಆಗ ಬಾರದು ಆರ್‍ಯ ಆಗಬಾರದು.

**ದಾರ್ಶಿಕ** – ತಾಯೆ,

(ಗೋಡೆಯ ಮೇಲೆ ಬರೆದಿರುವ ಚಿತ್ರಗಳನ್ನು ಪರೀಕ್ಷಿಸುತ್ತಾ)

ಆವ ಚಿತ್ರಗಳಿವು!
ಬಲಗೈಯ ಬಿಚ್ಚುಗತ್ತಿಯ ಹಿಡಿದು
ತನುವಿಂ ತೋಡಿ ತೂಗುವನು
ಅಲುಗದೆ ಖಂಡ ಖಂಡಗಳ
ಅವಕಂಡು ನಗುತಿಹುದು
ಕುಲಕಿಕ್ಕಿ ಕೂಗಿ ಆ ಪಕ್ಷಿ

ಹಿನ್ನೆಡೆಯು ಪರಿವಾರ ನಡುಗಿ
ನಾಚಿ-ಸಿಂದಿಸುದು ನಿಲ್ಲದೆ
ಪಕ್ಷಿ ಭಾರಕೆ ಬಂಡ ತೂಗುವ
ಪುಂಡಲೀಕನಾವ ನಿವ ?

(ಬೇರೊಂದರ ಬಳಿ)

ಕೆಚ್ಚೆದೆಯು ಬುಕ್ಕಿ ಹೊರಗೆಳೆದು
ನೀಡುತಿಹ ಕೆನ್ನೀರ ಕವಚವ
ಸ್ವಚ್ಛಮನದ ತಿಳಿವು ತೇಲಿಹುದು ಕಣ್ಣಲಿ
ಅದ ಕೊಂಡ ಅಪ, ಹರಸಿ ಹುಸಿನಗೆಯು ಬೀರುತಿಹ
ಆವ ದಾನ ವೀರರ ಚಿತ್ರವಿದು !

**೧ನೇ ಹೆಣ್ಣು** — ಈ ಚಿತ್ರ—
ಸಾವು ನೋವುಗಳಲ್ಲಿ ಜೀವ ಪಕ್ಷಿಗಳು
ಮನುಜ ಬಾಳ ಬೆಳಗ ಭಾಗ್ಯಕ್ಕೆ
ಮುನ್ನಿವರಿತ್ತ ಪ್ರಾಣಪಂಥಗಳು

**ದಾರ್ಶಿಕ** — ತಾಯಿ,
ಸರಿಯು ನುಡಿದಿಹೆ. ಚಿತ್ರಗಳಲ್ಲಿ ಇವು
ಭಾರತಿಯು ಬಸಿರಿಸಿದ ಜೀವ ಜ್ಯೋತಿಗಳು

(ಬಟ್ಟೆಯ ಮೇಲಿನ ಚಿತ್ರ ನೋಡಿ)

ಇವೇನ್ ! ಈ ಹೆಣ್ ತೇರನೇರಿಹಳ್

**೨ನೇ ಹೆಣ್ಣು** — ಹೆಣ್ ಜೀವನ ಪಥವನೇರಿಹಳ್

**ದಾರ್ಶಿಕ** — ಅದೆಂತು ?

**೨ನೇ ಹೆಣ್ಣು** – ಇದೋ

ಈ ರಥವೆ ಸಂಸಾರ
ಧರ್ಮಕರ್ಮಗಳೆ ಗಾಲಿಗಳು
ಇನಿಯ ಅಣುಗ ನೇಹ ಬಳಗ ವಾಜಿಯುಗಳು
ಲೋಪವಿಲ್ಲದ ವಿಶ್ವಾಸವೇ ಕಡಿವಾಣ
ಚತುರತೆಯೇ ಚಾವುಟಿಗೋಲು
ಧೈರ್ಯವೇ ಬಾವುಟ, ಮಾನವೆ ಹೊಂಗಳಸ
ಕಾಲವೇ ಪಥ, ಈ ಹೆಣ್ಣೇ ಸಾರಥಿ

ಇದೋ

ಲಜ್ಜೆ, ನಯ, ಭಯ, ಕಾಂತಿ ಕೋಮಲವೆಂಬ
ಮುತ್ತುಗಳ ಕೋದು ಹಾರ ಧರಿಸಿಹಳು.

**೧ನೇ ಹೆಣ್ಣು** – ಇದ ನಿಮ್ಮನಾಡಿನ ಅಕ್ಕತಂಗಿಯರ
ಕಾಣಿಕೆ ಎಂದು ಸ್ವೀಕರಿಸ ಬೇಕು.

**೨ನೇ ಹೆಣ್ಣು** – ಆದರದಿಂ ಇತ್ತಿಹೆವು.

**ದಾರ್ಶಿಕ** –

ನಿಮ್ಮ ಮನದಂತೆ ಒಪ್ಪಿಹೆನು. (ತೆಗೆದುಕೊಂಡು)
ನಿಮ್ಮ ನಡೆನುಡಿ ಕಂಡು ಅಚ್ಚರಿಯಾಗಿಹೆನು
ಮರಬಳ್ಳಿಯಾಗಿರ್ಪರ್ ಮನುಜರುತ್ತಮರಾಗಿಹರೆ

**೨ನೇ ಹೆಣ್ಣು** -- ಅವರ ವಾಣಿಗಳ ಪ್ರತಿಬಿಂಬಗಳ್ ನಾವ್

**ದಾರ್ಶಿಕ** – ಗುರುದೇವನೊಲಿಮೆ ಸಾಮಾನ್ಯವೇ!
ಗುರುದೇವನೀಗೆಲ್ಲಿಹನು?

**೧ನೇ ಹೆಣ್ಣು** — ಆಗೋ

ಆ ಶಾಲಿಶಾಂತರುಗಳ ನಡುವೆ
ಗುಹೆಯೊಂದಿಹುದು ಅಲ್ಲಿ ಚಿಂತಿಸುತ್ತಿಹನು

**ದಾರ್ಶಿಕ** — ಏನೆಂದು ಚಿಂತಿಸುತಿಹನು ?

**೧ನೇ ಹೆಣ್ಣು** — ಲೋಕ ಕಲ್ಯಾಣವನು.

**ದಾರ್ಶಿಕ** — ಗುರುವ ನೋಡಬಹುದೆ ?

**೨ನೇ ಹೆಣ್ಣು** — ಆಗಬಹುದು. ಸಂತಸ
ನಮಿಸುವೆವು (ನಮಸ್ಕಾರ ಮಾಡುವರು)

**ದಾರ್ಶಿಕ** .. ತಾಯರಿಗೆ
ವಂದನೆಗಳ್ (ಹೊರಡುವನು.)



## ದೃಶ್ಯ ೪

(ಬುದ್ಧ ಗುಹೆಯ ಬಳಿ ದಾರ್ಶಿಕನ ಪ್ರವೇಶ.)

**ದಾರ್ಶಿಕ** – ತಾಯುರು ಪೇಳ್ದ ಗುಹೆ ಇದೇ,
ಬಾಗಿಲು ಮುಚ್ಚಿಹುದು !
ಗುರುದೇವ ತಪವ ಬಿಟ್ಟೇಳಲಿಲ್ಲ.
(ಹೆಜ್ಜೆಗಳನ್ನು ನೋಡಿ)
ಇದೋ ಪಜ್ಜೆ !
ಬುದ್ಧ ಪಾದಗಳಿಂದ ಪಾವನವು ಈ ತಾಣ
ಬುದ್ಧವಾಣಿಗಳಿಂದ ಪಾವನವು ತರುಬಳ್ಳಿ,
ಬುದ್ಧಪ್ರಸಾದದಿಂದ ಪಾವನವು ಆಶ್ರಮು

(ಗುಹೆಬಾಗಿಲ ಬಳಿ)

ಗುರುದೇವ ! ತಪವ ಬಿಟ್ಟೇಳ್ಳಿ
ತಾಪಸಪಡುತಿಹ ಜನವ ಕಾಣಿರೈ
ಎಮ್ಮ ನಾಡಲವತರಿಸಿ ಉದ್ಧಾರ ಮಾಡಿಹಿರಿ
ಸದ್ಧರ್ಮ ವಾಹಿನಿಯ ಹರಿಸಿದಿರಿ ನಾಡ ಸಲುವಾಗಿ
ಉದ್ಧಾರವಾಗಿರೋ ಉತ್ತಮವ ಪಡೆಯಿರೋ
ಎಂದೆನುವ ತಾಯ ಮಾತ ಬಿತ್ತರಿಸಿದಿರಿ
ಗುರುದೇವ ಕೈಮುಗಿದು ಬೇಡುವೆನು
ಇನ್ನೊಮ್ಮೆ ಎಮ್ಮ ನಾಡಿಂಗೆ ಇಳಿದು ಬನ್ನಿರೈ
ಕಲ್ಮಷದ ಕಲ್ಲಾಗಿ ಕಾಣುವ ದೀನರ ಪಾವನ ಮಾಡಿರೈ
ಭರತಖಂಡವದು ಬಹು ವಿಧದಿ ಬಾಧೆಪಡುತಿಹುದು

ನಿಮ್ಮವತಾರ ಬಯಸುವುದು ಇನ್ನೊಮ್ಮೆ ಗುರುದೇವ !
ಇಳಿದು ಬನ್ನಿರೈ!

**ಬುದ್ಧ** – (ಒಳಗಿನಿಂದ)
ನಾವಿನ್ನಿಳಿಯಲಾರೆವು ನಿಮ್ಮ ನಾಡಿಂಗೆ
ಕೃತಘ್ನರ್ ಎಮ್ಮ ನೋಡಲಾಗದು.

**ದಾರ್ಶಿಕ** –
ಮನ್ನಿಪುದು ಗುರುದೇವ; ತಪ್ಪೆಸಗಿ ತಾಪ ಪಡುತಿಹೆವು
ನಿಮ್ಮ ಮರೆತಿಲ್ಲ, ನಿಮ್ಮ ವಾಣಿಗಳು ಈಗೀಗ ನಮ್ಮ
ತಟ್ಟುತಲಿಹುದು
ನೀವಿತ್ತ ಸಂದೇಶ ಈಗ ಕೇಳುತಲಿಹುದು.
ನಿಮ್ಮನನುಸರಿಸಿ ನಡೆದ ದೇವಪ್ರಿಯಚಾರಿತ್ರ ಕರ
ಸಂಚಾರವಾಗುತಿಹುದು
ಅವರೆಸಗಿದ ಕೀರ್ತಿ ಕಳಶವ ನಾವೆಸಗಲನುವಾಗುತಿಹೆವು
ಅವರ ಧರ್ಮ ಚಕ್ರವೇ ಇಂದು ನಮ್ಮ ರಾಷ್ಟ್ರತೇಜ.
ನೀವೆಮ್ಮನಾಡಿಂಗೆ ಇಳಿದು ಬಂದೊಡೆ;
“ ಜಯ ಜಯ ಗುರುದೇವ
ಜಯ ಜಯ ಜಗಜೀವ – ಬುದ್ಧ ”
ಎಂಬ ಜಯ ಘೋಷ ಗಗನ ಒಸದೇ
ಇರ್ಕಡೆಯ ಚಾಮರ ಮೇಲಿದ್ದ ಸತ್ರಿಗೆ
‘ಭನ್ತೇ, ಭಗವಾನ್’ ಎಂಬ ಪರಾಕಿಂದ
ಭಾರತದ ರತ್ನ ಸಿಂಹಾಸನವೇರಿಸಿ
ಮೂರ್ಧಾಭಿಷೇಕವ ಮಾಡುವೆವು

**ಬುದ್ಧ** – ರಾಜ್ಯ ದಾಹವ ನೀಗಿಹೆವು

**ಪಾರ್ಶಿಕ** —

ರಾಜ್ಯದಾಹವೇ! ಎಲ್ಲಿ ದಾಹವ ನೀಗಿಹಿರಿ ಅದ ಬಳ್ಳಿ
ಆದೊಡಂ, ಎಮ್ಮ ಉದ್ಧಾರ ಮಾಡಲೋಸುಗ
ಇಳಿದು ಬನ್ನಿರೈ.
ದೇವ ಸಾನ್ನಿಧ್ಯದಿಂದಿಳಿವ ದೇವಗಂಗೆಯಂದದಿ
ಇಳಿದು ಬನ್ನಿರೈ.

**ಬುದ್ಧ** —

ಇಳಿವೆವು. ಆದೊಡೆ ನಿಮ್ಮ ನಾಡಲಿ ಅವತರಿಸಲೆಡೆಯಿಲ್ಲ.

**ಪಾರ್ಶಿಕ** —

ಆ ಸೇತು ಹಿಮರಾಶಿವರೆಗುಂ ಅಡರಿರುವ ಭರತಖಂಡದಿ
ಎಡೆಯಿಲ್ಲ !
ಗುರುದೇವ.
ನೀವಿಳಿದು ಬರುವೊಡೆ ಸರ್ವಸಿದ್ಧಿಗಳ ಮಾಡುವೆವು.
ಬುದ್ಧನಗರವೆಂಬ ಪಟ್ಟಣವ ಕಟ್ಟುವೆವು.
ತೋಟ ತಟಾಕಗಳ ನಿರ್ಮಿಸುವೆವು.
ಕಾಪ ತಳಿತಂದು ಹಂದರವ ಹೆಣೆಯುವೆವು.
ನೀರ್ ನೀರಾಡಲ್ ನಾಡ ನದಿಗಳ
ನಿಮ್ಮೆಡೆಗೆ ಹರಿಸುವೆವು.
ಹದ್ದು ಮೀರಿ ಹರಡದಂತೆ ಹವೆಯ
ಹತೋಟಿಯಲಿಡುವೆವು.
ನೀವುಪದೇಶ ಮಾಡಲನುವಾಗೆ ಬೆಟ್ಟಗಳ ಜೋಡಿಸಿ
ಪೀಠವೊಂದು ರಂಗವನೆ ನಿರ್ಮಿಸುವೆವು.
ಸೂರ್ಯ ಚಂದ್ರರಿಗು ಮಿಗಿಲಾದ ದೀಪವಿಡುವೆವು

ಕೋಟಿ ಸೇನೆಯು ಕೋಟೆಗೆಟ್ಟಿ, ನೌಬತ್ತು
ನಗಾರಿಗಳ, ಝಲ್ಲಿ ಬಾವುಟಗಳೇರಿಸಿ
ಜಯಘೋಷ ಮಾಡುವೆವು

**ಬುದ್ಧ** –

ಮಲಗಿ ನಿದ್ರಿಸುವಗೆ ರಸ್ನಗನ್ನಡಿಯು ಮುಂದಿಟ್ಟು
ನೋಡೆಂಬು ಹೇಳಿದಂತಾಯ್ತು

**ವಾರ್ಶಿಕ** – ಮತ್ತೇನ ಮಾಡಬಯಸುವಿರಿ ?

**ಬುದ್ಧ** –

ಮನವ ಹದಮಾಡಬೇಕು. ಬಾಳ ಕೊಳೆ ತೆಗೆದು
ನಾಡು ಶುಚಿಯಾಗಬೇಕು.

**ವಾರ್ಶಿಕ** – ಅದೆಂತು ? ಗುರುದೇವ

**ಬುದ್ಧ** –

ಸದ್ಗುಣದ ಅರಿವಿಂದ, ಸರ್ವರಲಿ ಸಮಭಾವವಿಡಬೇಕು
ನಿತ್ಯ ಜೀವನ ಶುದ್ಧವಾಗಲಿ ಬೇಕು.

**ವಾರ್ಶಿಕ** – ಆ ದೇವನೇ ಸದ್ಗುಣವ ಕೊಡಬೇಕು.

**ಬುದ್ಧ** – ಅ ದೇವನೆಂದೇಕೆನುವೆ

**ವಾರ್ಶಿಕ** – ದೇವನೇಂ ಇಲ್ಲವೇ ?

**ಬುದ್ಧ** –

' ಉಂಟೇಕೆ?—ಇಲ್ಲವೇಕೆ? ' ಅದು ಬೇಡ

ದೇವದೇವನೆಂದೆನುವುದಕಿಂತ
ದೇವತ್ವವನುಭವಿಸಬೇಕು.
ನೀರು ನೀರೆಂದೊಡೆ ದಾಹವಡಗದು
ನೀರನೀಂಟಬೇಕು.

**ದಾರ್ಶಿಕ** -- ದೇವತ್ವವಾವುದದು ?

**ಬುದ್ಧ** - ಸದ್ಗುಣಗಳ್

**ದಾರ್ಶಿಕ** -- ಅದನೆಂತು ಅನುಭವಿಪುದು ? ಗುರುದೇವ

**ಬುದ್ಧ** -

ಅದು ಅತಿಗಹನ. ಅದಕೆ ಒಂದಲ್ಲ, ಹಲವು ಹೆದ್ದಾರಿ.
ಅವನವನಿಗೆ ಒಂದೊಂದು ದಾರಿ.
ಎಲ್ಲ ಕಾಲಕು ಎಲ್ಲ ದೇಶಕು ಎಲ್ಲ ಪ್ರಾಣಿಗು
ಸುಖದುಃಖ ಒಂದೇ ಎಂಬುದ ಮನದಲಿರಿಸಬೇಕು.
ತನ್ನ ನಡೆನುಡಿಯಿಂ ತಾನೆ ಶುದ್ಧವಾಗಲಿಬೇಕು.
ದುಃಖವೆಂಬ ಈ ಪ್ರಪಂಚ ಕೊಚ್ಚೆಯುರೊಚ್ಚದಂತೆ
ಅದರ ತಡಿ ಅದರಿಂ ಪೋಷಿಪ ಗಿಡಗಳಂತೆ ಮಾನವರು
ಆ ನೀರನೆಳೆಕೊಂಡು ಕಾಂಡವೇರಿಸಿ ಕೊನೆಗು ಹರಿಸಿ
ಚಿಗುರೊಡೆದು ಹೂಹೀಚಾಗಿ ಕೊನೆಗೆ ರಸದಾವು
ಆದಂತೆ ಬಾಳಬೇಕು.

ಸತ್ಯ ಸತ್ಯವೆಂದರಸಿದರೆ ಬಾರದು.
ಅದು ಕಣ್ಮುಚ್ಚಿ ಬೆಳಕ ಅರಸುವಂತೆ.
ಕಿವಿಯಿಂದ ಕೇಳದು ಕಣ್ಣು ಕಾಣದು
ಮೂಗು ಗ್ರಾಹಿಸದು,

ಮನವೊಂದೆ ಅದ ಕಂಡಿಹುದು.
ಮನಕೆ ಅದ ಪೋಷಿಸಬೇಕು.
ರಸದುಣುವು ದೇಹವ ಪೋಷಿಸುವಂತೆ,
ಸದ್ಗುಣವ ಮನಕೆ ಪೋಷಿಸಬೇಕು

ಆಶೆಗಳ ಹಿಡಿಬೇಡ

ಅದು ತಣ್ಣನೆಂಬ ನುಣ್ಣನೆಯ ಮೈಯೆಂದು
ನಾಗರವ ಹಿಡಿದಂತೆ. ಕೊರಳ ಸುತ್ತುವುದು.
ಆದಕೆ ತೃಪ್ತತೆಯೆ ಮಂತ್ರ-ನಿರ್ಲಿಪ್ತತೆಯೆ ತಂತ್ರ

ಬೆಳಕು ಬೇರೆಡೆಯಲಿಹುದೆಂದೆನಬೇಡ
ಅದು ತನ್ನ ತಲೆಯ ತಾನೇ ತಡವರಿಸಿ ಹುಡುಕಿದಂತೆ.
ಆ ಬೆಳಕ ಹಿಡಿದು ಹದಮಾಡಕೊಳಬೇಕು

**ದಾರ್ಶಿಕ** -- ನಿಮ್ಮ ಈ ವಾಣಿಗಳ ಇನ್ನೊಮ್ಮೆ ಬಿತ್ತರಿಸಿ
ಎಮ್ಮ ನಾಡಿಂಗೆ ಇಳಿದು ಬನ್ನಿರೈ

**ಬುದ್ಧ**

ಇಳಿಯುವೆವು.

ಶುದ್ಧ ಬಾಳೆಂಬ ಬಯಲ ವಿಂಗಡಿಸಿ
ಅದರಲಿ ಸಮಭಾವವೆಂಬ ಸೌಧಗಳ ಕಟ್ಟಿ
ಸತ್ಯರಾಜವೀದಿಗಳ ಜ್ಞಾನ ಸಾಲು ದೀಪಗಳ
ಸಹನೆ ಕೋಟೆಯ ಮಾಡಿ, ಕನಿಕರದ ನದಿಹರಿಸಿ
ತೃಪ್ತತೆಯ ಆರಾಮವೆಸಗಿ
ಪ್ರೇಮನೆಲಗಟ್ಟಿಂದೆದ್ದ ಸಾಧನಧ್ವಜಸ್ತಂಭದ
ತುದಿಯಲಿ ಕಲ್ಯಾಣ ಬಾವುಟ ಗಗನದಲಾಡು
—ವಂತೆ ಬುದ್ಧನಗರವ ರಚಿಸಿದೊಡೆ,

ಬಿಡದೆ ನಿಮ್ಮ ನಾಡಿಂಗಿಳಿಯುವೆವು.
ಒಂದಲ್ಲ ಎರಡಲ್ಲ ಸಾವಿರ ಸಾವಿರ
ಬುದ್ಧರಾಗಿಳಿಯುವೆವು

**ದಾರ್ಶಿಕೆ** – ಭಗವನ್, ಇದುವೆ ಗುರುವಾಜ್ಞೆ

**ಬುದ್ಧ** – ಅಹುದು.
ಕಲ್ಯಾಣಮಸ್ತು.

**ದಾರ್ಶಿಕೆ** –

ಗುರುವಾಜ್ಞೆ. ಗುರುವಾಜ್ಞೆ. (ಹೊರಡುವಳು)



## ದೃಶ್ಯ ೫.

(ಬೆಳಗಿನಹೊತ್ತು ಒಂದು ಸರೋವರದ ಬಳಿ ವಾರ್ತಿಕನ ಪ್ರವೇಶ.)

**ವಾರ್ತಿಕ –**

ಕವಡಿ ಮೂಡಲ ಮುಖದಿ ಕೆಂಪಡರಿ ಕಾಣುವುದು
ತೂಗು ತಂಗಾಳಿಯಲಿ ಅಲರರಳಿ ಆಡುವುದು
ತಿಳಿಗೊಳದ ತಣುವಿನಲಿ ತಾವರೆಯು ತೂಗುವುದು
ಮುಂಜಾನೆ ತಾನು ತಿರೆಯ ಮುಸಕ ತೆರೆದಿಹುದು.
ಮನೋಹರ ಪ್ರಭಾತವಿದು.

(ಒಂದು ಕಡೆ ಕುಳಿತುಕೊಳ್ಳುವನು. ಹುಲಿಯ ಗರ್ಜನೆಯು ಕೇಳಿಬರುವುದು.)

ಪುಲಿ ! ಪುಲಿ ! ! (ಹುಲಿ ಕಾಣುವುದು.)
ಹಾ ! ಏಂ ಪ್ರಮಾದಂ ! ಪುಲಿಯ ಹಿಂಬಾಲಿಸಿ
ಕುನ್ನಿ ಮರಿಗಳ್ ಬುಳು ಬುಳನೆ ಬರುತಿಹವು !
ಪುಲಿಗೆ ಕುನ್ನಿಯೆ ಮರಿ ! ಪ್ರಕೃತಿಯೇಂ
ವಿಕೃತಿಯಾಗಿಹುದೇ ?
ಕುನ್ನಿಪಡೆದ ತಾಯ್ ಪುಲಿಯಾದೊಡೇಂ
ಸಿಂಗಮಾದೊಡೇಂ ಸತ್ವಮಿಲ್ಲದುದೇ
ನೋಡುವೆನು (ಹಿಂಬಾಲಿಸಿ ಹೋಗುವನು. ದಾರಿಯಲ್ಲಿ ಒಬ್ಬ ಸನ್ಯಾಸಿಯು ಕಾಣುವನು.)
ಆರವು ಕಾವಿವಸ್ತ್ರಧಾರಿಗಳ್ ?
ಈ ಎಡೆಯೊಳಾರಾರುಂಟೋ
ತಪೋಮಹಿಮರ್, ಯೋಗಿಗಳ್, ವಿರಾಗಿಗಳ್

ಈ ಹಿಮಂತನೇಂ ಸಾಮಾನ್ಯನೇ,
ದೇವ ಲೋಕವನೆ ಅಳವಡಿಸಿಕೊಂಡಿಹನು

ಅದೋ ಬಂದರ್
ಅಸ್ತುಬೀಳುವೆ (ಹತ್ತಿರಹೋಗಿ ನಮಸ್ಕರಿಸುವನು)

**ಸನ್ಯಾಸಿ** –

ಸುಪ್ರಭಾತವಕ್ಕೆ—
ಮಾನವರ್ ಕಾಂಬ ತಾಣವಿದಲ್ಲ
ಅದೆಂತು ಬಂದಿಹಿ ನೀನು?

**ದಾರ್ಶಿಕ** –

ಮಾನವರ ಕಾಪಿಡುವ ದೇವರ್ಗಳ್ ನೀವೆ?
ಬೆಟ್ಟಗುಡ್ಡವ ಸೇರ್ದೊಡೆ, ಮಾನಿಸರೇಂ, ಬಾರವೇ

**ಸನ್ಯಾಸಿ** –

ಸಾಮಾನ್ಯ ಬೀಡಲ್ಲ ಇದು
ಯೋಗಾಶ್ರಮ
ಮಾನಿಸರ ನೆರಳ್ ಬೀಳಬಾರದು.

**ದಾರ್ಶಿಕ** –

ನಾನಾಗಿ ಬರಲಿಲ್ಲ. ಕುನ್ನಿಮರಿಗಳ ಪಡೆದ
ತಾಯಹುಲಿಯ ಹಿಂಬಾಲಿಸಿ ಬಂದೊಡೆ
ನಿಮ್ಮ ದರ್ಶನವಾಯ್ತು ನಿತೆ.
ಈ ಅತಿಶಯ ಆಶ್ರಮವಾವುದು?

**ಸನ್ಯಾಸಿ** –

ಯೋಗಾಶ್ರಮವಿದು.
ಸ್ವಾಮಿ ವಿವೇಕಾನಂದರ್ ಗುರುಗಳಿಂದ ಕೆ

**ದಾರ್ಶಿಕ** –

ವಿವೇಕಾನಂದರ್ ! (ಬೀಳುವನು.)

**ಸನ್ಯಾಸಿ** –

ಆರಿವನು ಗುರುಗಳ ಹೆಸರ ಕೇಳಿದೊಡೆ ಬಿಪ್ಪನಿವ
ಸಂಬಂಧವೇನಿಹುದೋ ? ಬಲ್ಲವರಾರು ?
ಆರಾದೊಡೇನು ? ಬಿದ್ದವನನುಪಚರಿಸಲಿಜೀತು.
[ಕಮಂಡಲದ ನೀರು ಪ್ರೋಕ್ಷಿಸಿ ಉಪಚರಿಸುವನು.]
ಅಯ್ಯಾ ! ಏಳೇಳು. ಇಲ್ಲಿ ನಿಲಬೇಡ
ಗುರುಗಳ್ ಈ ಮಾರ್ಗವೆಳಸಿಕೊಳಕೆ
ಬರುವ ಹೊತ್ತಿದು.
ಅದೋ ! ಬಂದಂತೆ ಕಾಣುವುದು
ಇಲ್ಲೆ ಎಲ್ಲಾದರ್ ಅಡಗಡಗು ! !
(ಸನ್ಯಾಸಿ ಹೊರಡುವನು.)

**ದಾರ್ಶಿಕ** –

(ಎಪ್ಪು) ಇಂದೆನ್ನ ಬವಣೆ ಬಯಲಾಗುವುದು
ಅದೋ ಬಂದರ್
ದಂಡ ಕಮಂಡಲ ಉದ್ದಂಡ ದೇಹದ
ಸನ್ಯಾಸಿ ನಡೆದು ಬರುತಿಹನೆನ್ನೆಡೆಗೆ
ಕ್ಷೀರಸಾಗರದಿಂದೆದ್ದು ಬಂದ
ಚಂದ್ರಮನಂತೆ ಹೊಳೆಯುವುದು ಮುಖಕಮಲ
ವಿಶ್ವವೊಟ್ಟುಗೊಂಬ ಕಣ್ಣಾ ವಿಶಾಲ
ಅಬ್ಬಾ ! ತೇಜೋರಾಶಿಯೊಂದೆದ್ದು
ನಡೆದು ಬರುತಿಹುದು, ಬರುತಿಹುದು !
(ಹತ್ತಿರಹೋಗಿ ಸ್ವಾಮಿ ವಿವೇಕಾನಂದರ ಕಾಲಮೇಲೆ ಬೀಳುವನು.)

**ಸ್ವಾಮಿ** –

ಆರೆನ್ನ ಕಾಲ ಕಟ್ಟಿಹರು
ಎನ್ನ ಮುಟ್ಟಬಾರದು ಪಾಪಿಸರ್

**ದಾರ್ಶಿಕ** –

ಈ ಪಾಪಿಸರ ಕಾಪಿಡುವ ಸ್ವಾಮಿ
ನೀವಲ್ಲವೆ ?

**ಸ್ವಾಮಿ** –

ಉದಯದಾರ್ಶ್ನೀಕನೆಸಗಲ್ ನೀರಡಿಗೆ ಪೋಗುತಿಹೆವು
ಎನ್ನ ತಡೆಯ ಬಾರದು.

**ದಾರ್ಶಿಕ** –

ಅಹರ್ನಿಶಿ ನೀನೆಸಗುವಾರ್ಶ್ನೀಕ
ಪಾಮರರುದ್ಧಾರ ಮಾಡಲೋಸುಗವಲ್ಲವೆ ?

**ಸ್ವಾಮಿ** — ಸರ್ವರುದ್ಧಾರ ಸ್ವಾಮಿ ಆ ದೇವನೆಸಗುವನು.

**ದಾರ್ಶಿಕ** – ಆ ದೇವ ನೀವೆಂದೆ ತಿಳಿದಿಹೆನು

**ಸ್ವಾಮಿ** — ಬಲು ಮಾತನಾಡುವಿ
ಕಾಲಬಿಡು.

**ದಾರ್ಶಿಕ** – ಬಿಟ್ಟು ಕೆಟ್ಟಿಹೆವು. ಇನ್ನು ಬಿಡುವುದುಂಟೆ ?

**ಸ್ವಾಮಿ** —

'ಬಿಟ್ಟು ಕೆಟ್ಟಿಹೆವು' ಏನನೋ ಆಡುವನು.
ಕಾಲ ಬಿಡು, ಇಲ್ಲದೊಡೆ ಬಲವಂತವಾಗುವುದು.

**ದಾರ್ಶಿಕ** – ಏನಾದೊಡಂ ಬಿಡಲಾಗದು.

**ಸ್ವಾಮಿ** — ಬಲುಮಾತನಾಡುತಿಹೆ. ಬಿಟ್ಟೇಳು.

**ದಾರ್ಶಿಕ** – ಬಿಡಲಾರೆ.

**ಸ್ವಾಮಿ** — ಮೂರ್ಖನಿವ! ಏನ ಬಯಸುವಿ ಕೇಳು.

**ದಾರ್ಶಿಕ** – ದೇವನೆಡೆ ಭಕ್ತ ಬಯಸುವುದೇನಿಹುದು

**ಸ್ವಾಮಿ** — ಚಿನ್ನ ಚಪಲವೇ ?

**ದಾರ್ಶಿಕ** – ಸೂರ್ಯನೆಡೆಯಲ್ಲಿ ಬಡಸೊಡರ ಬಯಸುವುದೇ?

**ಸ್ವಾಮಿ** — ಮತ್ತೇನ ಬಯಸುವೆ ?

**ದಾರ್ಶಿಕ** – ಚಿತ್ರರಿಸಿದ ನಿಮ್ಮ ಅಮರ ವಾಣಿಗಳ

**ಸ್ವಾಮಿ** —
(ಕುತೂಹಲದಿಂದ) 'ಚಿತ್ರರಿಸಿದ ವಾಣಿಗಳು' ಅರಿವನೆ ?
ನೀನಾರ್ ? ಎಲ್ಲಿಂದ ಬಂದಿಹೆ.

**ದಾರ್ಶಿಕ** – ನೀವ್ ಬಂದ ನಾಡಿಂದ

**ಸ್ವಾಮಿ** –
(ಚಕಿತರಾಗಿ) ಏಂ ! ಭರತಖಂಡದವನೇ!
(ಆವೇಶದಿಂದ) ಬಾ ! ಸೋದರಾ ! ! ಬಾಚಿತಬ್ಬೆನ್ನ.
(ತಬ್ಬಿಕೊಳ್ಳುವರು)

**ದಾರ್ಶಿಕ** –

ಸ್ವಾಮಿನ್ ! ಸಗ್ಗಸಗ್ಗವೆ ನೀಡಿದರೂ ಅಪ್ಪುವುದೆ ಈ ತೃಪ್ತಿ
ಮುಕ್ತಿ ಸುಖಕೂ ಮಿಗಿಲಾಗಿಹುದು
ಬೆಳಕಲ್ಲಿ ಬೆಳಕ ಕಾಣುತಿಹೆ.

**ಸ್ವಾಮಿ** — ಸೋದರಾ

**ದಾರ್ಶಿಕ** – ಸ್ವಾಮಿನ್

(ಅನಂತರ ಒಂದು ಕಡೆ ಕುಳಿತುಕೊಳ್ಳುವರು)

**ಸ್ವಾಮಿ** —

ಭಾರತದಿ ಜನ್ಮತಾಳುವುದು ದೇವಲೋಕಕೆ ಸಮ.

**ದಾರ್ಶಿಕ** – ಅದು ನಿಮ್ಮಂತೆ ನಡೆವರಿಗೆ

**ಸ್ವಾಮಿ** —

ಅಂತಲ್ಲ ಸೋದರಾ !
ಆ ಗಾಳಿ ಬೆಳಕನಾನ್ದ ಪಶುವಿಂಗು
ಶ್ರೇಷ್ಠತೆಯುಂಟು

**ದಾರ್ಶಿಕ** –

ಈಗ ಪಶುವಾಗಿರ್ಪೊಡೆ ಎನಿತೋ ಸೊಗಸು
ಅವಕು ಕೊನೆಯಾಗಿ ಕಾಣುವರು.

**ಸ್ವಾಮಿ** —

ಇದ ಬಲ್ಲಿಹೆವು ದಿನದಿನವು ಯೋಗದಲಿ
ಕಾಣುತಲಿಹೆವು.
ಜನ ಎಂತು ತಮ್ಮ ತಾವೇ ಮೋಸಗೈವರ್
ಎಂತು ಯೋಚಿಪರ್, ನಡೆಯೆಂತು
ಧರ್ಮವ ದಾಟುವುದೆಂತು,
ದೀನರ ಸುಲಿವುದೆಂತು,
ಶ್ರೇಷ್ಠತೆಯ ಕಡೆಗಾಣಿಪುದೆಂತು.
ದಿನ ದಿನಕು ಇಳಿಯುತಿಹ ಜನವ ಕಾಣುತಿಹೆವು.

ಅದ ಕುರುಹಾಗಿ ಹುಲಿ ಕುನ್ನಿಗಳ
ಮೊಲ ಹುಲಿಗಳ, ಕುರಿಯಾನೆಗಳ
ಹೆತ್ತಂತೆ ಕಾಣುತಿಹುದು.

ಆ ಜ್ಞಾನ ಸಾಗರದಲಿ ಎತ್ತಲೋ
ಹೊಯ್ದಾಟವಾಗುತಿಹುದು ಅದ ಬಲ್ಲೆ
ದಾರಿ ಮೀರಿದೊಡೆ ದಿಕ್ಕು ಕೆಡಲೇ ಬೇಕು.

**ದಾರ್ಶಿಕ** — ಇನ್ನದಕೆ ಮುಕ್ತಿ ಕಾಣವೆ?

**ಸ್ವಾಮಿ** —

ದಕ್ಷಿಣೇಶ್ವರದಿಂ ರಾಮೇಶ್ವರವಿಗೂ
ಓಡಾಡಿ ಹೊಸ ಶಕ್ತಿಯನೆಬ್ಬರಿಸಿಹೆವು.
ಅಟ್ಲಾಂಟಿಕ್ಕಿನಾಚೆಗೂ ಹಾಯ್ದು
ಹೊತ್ತು ಬೆಳೆಸಿದೆವು ಬೆಳಕ
ಏನ ಹೊತ್ತರು ಏನ ತೆತ್ತರು
ಕಾಣದಾದರ್ ಕವಲೊಡೆದರ್
(ಶತ್ರಿಂಕರೆದು) ಇತ್ತ ಬಾ ಸೋದರಾ!
ಇನ್ನು ಶಕ್ತಿ ಕುಂದಿಲ್ಲ ನಿನಗೆ
ಸೀನಿಳಿದಿಲ್ಲ—ನಿಸ್ಸಿಂತ್ರದಿಲ್ಲ
ನೋಡು! ನಿನ್ನ ಸ್ವೈಧಮನಿಯಲಿ
ಹರಿಯುವುದು ಆರ್ಯರಕ್ತ. ಮುತ್ತು
ಇದ್ದಿಲ ಸೇರಿದಂತೆ ಆಗಿಹುದು
ಅದ ಕಾಣು. ನಿನ್ನೊಳ ಬೆಳಕು
ಅತ್ಯನುಪಮ ನಿನ್ನ ಮುತ್ತರಿಸಿ
ಬೆಳೆದ ಬೇಲಿಯಿಂ ಕಾಣದಾಗಿಹೆ
ಹೊರ ನೆಗೆದು ಬಾ! ಚಿಗಿದು ಬಾ!!

ದಾರ್ಶಿಕ — ಸ್ವಾಮಿನ್, ಶಕ್ತಿಯುನಿತುಂಟೇ ?

ಸ್ವಾಮಿ —

ಅಶಕ್ತನೆನಬೇಡ. ಅದೆ ಪಾಪದ ಮೊದಲ್.
ನಿನ್ನ ನಂಬದುದು ಕಾಡುಪಾಪದ ಬುನಾದಿಯಲ್ಲ
ಜೀವಶಕ್ತಿಯು ಕಂಡವರು—ದೇವಶಕ್ತಿಯಕಂಡವರು.
ಜಡವೇನು ಜೀವವೇನು ಜಗವುವಾವುದು
ಎಂದು ಓಡಾಡಿದವರ್

ಬ್ರಹ್ಮಾಂಡಗಳ ಒಸಿರ ಹಾಯ್ದು ಹೋಗಿಹರು
ಅದರ ಕೊನೆ ಮೊದಲಿಲ್ಲದ ನೋಟ ಕಂಡಿಹರು
ಸರ್ವಶಕ್ತನೆಂದು ಸರ್ವ ಸ್ವಾತಂತ್ರ್ಯನೆಂದು
ಮರೆಯುಲ್ಲಿ ಅಡಗಿರ್ದ್ದ ಆ ದೇವನಂ
ಸತ್ಕರ್ಮ ಜ್ಞಾನಭಕ್ತಿಸಾಧನ ಕೊಕ್ಕೆಯಿಂ
ಹಿಡಿದೆಳೆದು "ಏನಲ್ವೆ ಎಲ್ಲಡಗುವೆ
ಎದ್ದು ಬಾ," ಎಂದು ಹೂಂಕರಿಸಿ ಅವನ
ಬಯಲ ಮಾಡಿದರ್

ಸೋದರಾ ! ಏನೆಂದು ತಿಳಿದಿಹೆ
ನೀನೆಂಬುದ

ಜೊಗಸೆನೆತ್ತರ ಹಿಡಿಮಾಂಸ ಹಸಿತೊವಲ
ಮೂಟೆ ಎಂದು ತಿಳಿದಿಹೆಯಾ ?
ಮಿಂಚ ಮುಚ್ಚುವ! ಸಿಡಿಲ ಸೀಸುವ!
ಶಕ್ತಿಯಿಂ ತುಂಬಿರುವ ಸೋದರ
ಸಾಮಾನ್ಯನೇ ನೀಂ.
ನಿನ್ನ ಮೈ ಅಣು ಅಣುವು ಮಾತಾಡುವುದು

ಒಮ್ಮೆ ಹೂಂಕರಿಸಿ ತೊಡೆತಟ್ಟಿ ನಿಂದೊಡೆ
ನಡುಗಿ ನೆಟ್ಟಗಣ್ಣಿಂದಿಳಿವನು ಸಿಂಹಾಸನದಿ
ಆ ದೇವೇಂದ್ರ

ನಿನ್ನ ಉಸಿರೊಂದು ಹೊತ್ತುವುದು ಕಾಡ್ಗಿಚ್ಚ
ನಿನ್ನೊಂದು ನೋಟಕೆ ಅಡಗುವುದು ಪರ್ವತಗಳ್
ಒಮ್ಮೆ ನೀ ಚಪ್ಪರಿಸಿದೊಡೆ, ಬರಿದಾಗುವುದು ಸಾಗರವೆ
ನಿನ್ನ ನೆತ್ತರ ಚಿನ್ನ ಕಬ್ಬಿಣ ಸೀಸ ತಾಮ್ರ ನೀರೆಂದೆನಬೇಡ
ತ್ಯಾಗಬಲಿಯಿಂದ ವೀರ ಕೂಗಿಂದ ಧೀರನಡೆಯಿಂದ
ಆಗಿಹುದು

ಸೂರ್ಯಮಂಡಲವ ಕಿತ್ತು ಚೆಂಡಾಡುವ ನಿನ್ನ ಕ್ಷಾತ್ರ
ದೀನರ ಕಂಡೊಡೆ ಕರಗಿ ಹರಿಯುವ ದೈನ್ಯಕ್ಷೇತ್ರ
ಹುಲಿಯ ಹಾಲಿಂಡಿ, ಸಿಂಗವ ಸವರಿ ಮತ್ತಗಜಗಳ
ಹಿಡಿಯಾಟವಾಡುವ ನಿನ್ನಾಟ.

ಗುಡ್ಡ ಚಿಮ್ಮುವ ಜ್ವಾಲಾಮುಖಿಯಂತೆ ನೀನು
ಎದ್ದ ಸಾಗರವ ಸದ್ದಿಲ್ಲದೆ ನುಂಗಿದ
ಸಾಸುವೆಯಂತೆ. ನಿನ್ನ ಗಂಭೀರ
ದಾನಕೆ ದಣಿವು ನಿನ್ನಲ್ಲುಂಟು.
ಮಾನವ ಕೋಡು ನೀನು
ಭಕ್ತಿಯ ಹೂ,
ಮುಕ್ತಿಯ ದುಂಬಿ, ನೀನು
ನೀನು ಸೋದರಾ !

ನಿನ್ನಾರಾಧನೆಯ ದೇವರ್ಗಳ್ ನೈವೇದ್ಯಕೆ
ಬಾಯ್ಬಿಟ್ಟು ವಸ್ತ್ರಂಗಳಿಗೆ ಕೈಯೊಡ್ಡಿ

ಗಂಧಪುಷ್ಪ ಬಿಲ್ವ ತುಳಸಿಗಳಿಂದ ಮುಚ್ಚಿಕೊಳ್ಳ
ದೇವರ್ಗ್ಗಳೆ? ಸಿಡಿಲ ಶೂಲ ಹಿಡಿದು ಉರಿಗಣ್ಣಿಂ
ದುಷ್ಟಧ್ವಂಸಕ ನಾಟ್ಯಮೂರ್ತಿಗಳ್
ಚಕ್ರಚೇತನಗೊಳಿಸಿ ಗದೆಯ ಗುಡುಗಿಸಿ
‘ಅಭೀಃ’ ಶಂಖವ ಮೊಳಗಿ, ಪಾಲಿಸೆ
ಕರಕಮಲ ಚಾಚಿಹ ನಾಲ್ಕು ತೋಳಿನ
ದೇವರ್ಗಳ್
ಅದೋ ನಿನ್ನ ತ್ಯಾಗದ ತಾತಂದಿರ್
ಧರ್ಮ ಕಾಪಿಡೆ, ಮೈಮೂಳೆ ಕಿತ್ತಿಹರ್
ಬಾಣ ಮಂಚದಿ ಮಲಗಿಹರ್
ಇದೋ ತಂದೆಯರ್
ಏಳು ಸತ್ತಿಗೆ ನೆಳಲಲ್ಲಿ ನಡೆಯುತಿಹರ್
ಇತಿಹಾಸನಾಡಿಸಿದವರ್ ನಿನ್ನತಾಯರ್
ಮಾನ ಸಂರಕ್ಷಣೆಯ ಮಾಡೆ ಕೆಂಡ ಕುಂಡಗಳ್
ಸೇರ್ದವರ್ ನಿನ ಸೋದರಿಯರ್
ಸತ್ಯಕ್ಕೆ ಸಾವಗೆದ್ದವರ್ ನಿನ್ನ ಸುತ್ತಲ ಬಳಗ
ನೀನಾರೆಂದು ತಿಳಿದಿಹೆ ಸೋದರಾ
ಕುರಿಯೋ, ಕುನ್ನಿಯೊ ?

**ದಾರ್ಶಿಕ** —

ಸ್ವಾಮಿನ್, ಶಕ್ತಿಮೂರ್ತಿಗಳೆ ನಾವು
ಸಾವ ಗೆದ್ದವರ ಬಳಗವೆ ?
ಏನಾದರೇಂ
ಒಕ್ಕೊರಳಿಲ್ಲ ಒಕ್ಕೂಟವಿಲ್ಲ.

**ಸ್ವಾಮಿ –**

ಅದಕೆ ಚಿಂತಿಸ ಬೇಡ
ನಿನ್ನ ಶಕ್ತಿಯು ನೀ ಹೊರಬೆಲ್ಲು
ಅದುವೆ ಕರ್ಮ–ಧರ್ಮ
ನೋಡಲ್ಲಿ ಕಾಣುತಿಹುದು
ಫಲಿತವೃಕ್ಷಗಳು ಹೂ ಬಳ್ಳಿ ಹಲವು
ಅವು ಒಕ್ಕೂಟದಲಿರಲಿ ಒಂಟಿಯಾಗಿರಲಿ
ತಮ್ಮ ಶಕ್ತಿಯು ಚೆಲ್ಲಿ ಫಲಿತವಾಗಿ
ನಿಷ್ಕಾಮದಿ ತಮ್ಮಾಯುವ ದಾಟಿ
ಜೀವನವ ಸಾಧಿಸಿಕೊಂಬುವು
ಅದರಂತೆ ನಿನ್ನ ಬಾಳ ಬೆಳಸಬೇಕು.

**ದಾರ್ಶಿಕ –** ಆ ಬಾಳ ಬೆಳಸಲಾಗುವುದೆ ಹೇಗೆ?

**ಸ್ವಾಮಿ –**

ಸಾಧನದಿಂದ ಅಪ್ಪುದು
ಕಣ್ಣ ಬಿಟ್ಟೊಡೆ ಈ ಲೋಕ
ಕಣ್ಣ ಮುಚ್ಚಿದೊಡೆ ಆ ಲೋಕ
ಕಂಡು ಅದರಲಿ ಓಡಾಡಬೇಕು
ಅದುವೆ ಸಾಧನ.

ಕಣ್ಣಮುಚ್ಚಿದೊಡೆ ಆ ಲೋಕ

(ಕಣ್ಣು ಮುಚ್ಚಿಕೊಳ್ಳುವನು)

ಅಹುದು ಸ್ವಾಮಿ!
ನಿಜ ಬೆಳಕ ಕಾಣುತಿಹೆ



" ಕಣ್ಣು ಬಿಟ್ಟೊಡೆ ಈ ಲೋಕ
ಕಣ್ಣು ಮುಚ್ಚಿದೊಡೆ ಆ ಲೋಕ
ಕಂಡು ಅದರಲಿ ಓಡಾಡಬೇಕು
ಅದುವೆ ಸಾಧನ. "

ಜ್ಞಾನಿ —

ಶಾಂತಿ ಸಾಧಿಸು (ಮರೆಯಾಗುವನು.)

ದಾರ್ಶನಿಕ —

(ಕಣ್ಣುಬಿಟ್ಟು) ಎಲ್ಲಿ ಕಾಣದಾದರ್
ಸ್ವಾಮಿನ್. ನಿನ್ನ ಸೋಂಕಿದ ನಾನೇ ಧನ್ಯ.

(ಹೊರಡುವನು.)



## ದೃಶ್ಯ ೬

(ದಾರ್ಶಿಕನು ಕಡಿದಾದ ಹಿಮದ ಕಣಿವೆಯಿಂದ ಇಳಿದು ಬರುತ್ತಿರುವನು.)

**ದಾರ್ಶಿಕ –**

(ಪರ್ವತಶಿಖರಗಳ ಕಡೆ ದೃಷ್ಟಿ ಬೀರಿ.)

ಠೀವಿ ತಲೆಯೆತ್ತಿ ನಿಂದಿಹ ಈ ಹಿಮವಂತನ ಸಡಗರವೇಂ?
ಅಂಬರದಿ ಓಡಾಡುವ ದಿವಿಜರು ವಿಹರಿಸಲೆಳಸಿ
ಅಲ್ಲಿಂ ಇಳಿದು ಬರೆ ನಿಚ್ಚಣಿಗೆ ಮಾಡಿಹರೋ ಇವನ!
ಹಿಮಶುಭ್ರವಸ್ತ್ರದಿಂ ಪಚ್ಚೆ ಸೋಪಾನದಿಂ
ಸಿಂಗರವಾಗಿ
ವಾರಿದವಾರಿಸೆ ಪನ್ನೀರ ಪರಿಮಳವೆರಚಿ
ತನಿಪಣ್ಣಾತಿನಿಸಿ, ಚಿಲಿಪಿಲಿಯಿಂ ಉಪಚರಿಸಿ
'ಶುಭಂ ಸಾವಧಾನಂ' ಎಂದೆನುವ
ಹೊಗಳಪಾಡನು ಪಕ್ಷಿಸಂಕುಲದಿ ಹಾಡಿಸಿ
ಬಾಲ ಬಾವುಟ ಸಿಂಹಶಾರ್ದೂಲಗಳನೆಗೆಸಿ
ಮೇಘಮಂಡಲವ ನಮ್ರತೆಯಿಂ ತಲೆಬಾಗಿ ನಿಲ್ಲಿಸಿ
ಮಿಂಚುಗೋಲಿಂ ಗುಡುಗ ನಗಾರಿ ಮೊಳಗಿಸಿ
ಶ್ವೇತ ಸತ್ತಿಗೆಯ ಹಿಡಿವೆತ್ತಿ, ಆ ದಿವಿಜರ
ಭೂಮಿಗಿಳಿಸಿ ತರಲನುವಾಗಿ ಗಗನ ತುಂಬಿ
ನಿಂದಿಹ ಈ ಹಿಮವಂತನ ಗಡುಸೆನಿತು!
ಏನೆಲ್ಲೈ ಹಿಮವಂತ!

ನಿನ್ನ ಮುಟ್ಟಬಾರದೆ ಮಾನಿಸರು
ಮುಟ್ಟಿದೊಡೇಂ ಅಪಮಂಗಲವೋ ?
ಹಿಮಗಡ್ಡೆಗಳಿಂ ಕೋಟೆಗಟ್ಟಿ
ಕಪುರಿ ಕರದರಗಳ ಸುತ್ತುಗಟ್ಟಿ
ಚರ್ಜೊಬ್ಬಿ ಅಡ್ಡ ಕಟ್ಟಿರುವೆಯಾ ?
ಬೇಡಪ್ಪ ! ನೀ ಬಲು ಸಾಸಿಗನು
ನಿನ್ನಿಂದ ಜೀವ ನಿನ್ನಿಂದ ಭಾವ
ನಿನ್ನಲ್ಲೆ ದೇವ ನೀನೆ ಕಾವ
ಕಡುಭಟನೈ !

(ಹಾಗೆ ಮುಂದಕ್ಕೆ ಬರುತ್ತಿರಲು ಅವ್ಯವಸ್ಥೆಯಾಗಿರುವ ಒಂದು ಆಶ್ರಮದಬಳಿ ನಿಲ್ಲುವನು.)

ಏನಿದೀ ವೈಪರೀತ್ಯ !
ಹರಕು ಚರಕ ಬಾವುಟ ಮುರುಕು ಜೋಪಡಿಗೆ
ಜೀರ್ಣಿಸಿಹ ಜಗಲಿ, ಸೋತು ನಿಂದಿಹ ಕಂಬಗಳ್
ಗಾಳಿಗೆ 'ಕಿರ್' ಎನ್ನುವ ಬಾಗಿಲ ಬಡಿವಾಟ
ನೆಲ ಸೇಗಿಲು ಪಾಪಂತೆ
ಸಿಂಪು ಮಲಗಲನುವಾಗುತಿಪ ಗೋಡೆ
ಆರು ಬಿಟ್ಟೋಡಿಹ ಆಶ್ರಮವೋ ಕಾಣೆ !
(ನೆಲದಮೇಲೆ ಬಿದ್ದಿರುವ ಪದಾರ್ಥಗಳನ್ನು ನೋಡಿ.)
ಓಹೋ! ತುಕ್ಕುತಿಂದಿಹ ನೂಲುವ ತಕಲಿ
ಅದೋ! ಧೂಳ್ದಾರವ ತಬ್ಬಲಿ ಚರಕ
ಇದೇಂ, ಶ್ರೀ ಭಗವದ್ಗೀತಾ
ಅಯ್ಯೋ ! ಬಾಚಿ ತಬ್ಬಿಹದು ನೆಲವ
ಭಗವದ್ಗೀತಾ

(ಮುಂದೆಹೋಗಿ)

ಆರುಂಟು ಈ ಆರಾಮದಲಿ (ಒಳಗೆ ಹೋಗಿ)
ಅಬ್ಬ ! ಗಾಳಿ ಕೆಟ್ಟಿಹುದು ಗತಿಯಾರುಂಟು ?
ಬಾಳಿ ಬದುಕಿ ಬಡವಾಗಿ ಹೋದಂತೆ ಕಾಣುವುದು.
ಇದೇನ್ ! ಬಣ್ಣಬಣ್ಣದಿ ಗೋಡೆಮೇಲೇನನೋ
ಬರೆದಿಹರ್ (ಓದುವನು)
“ ಸತ್ಯವೆಸಗಬೇಕು, ಅಹಿಂಸೆ ಸಾಧಿಸಬೇಕು
ಸತ್ಯಾಗ್ರಹಿಯಾಗಬೇಕು, ಮೌನಧರಿಸಬೇಕು.
ಮಹಾತ್ಮ ಗಾಂಧೀಕಿ ಜೈ ! ಜೈ !! ಜೈ !!! ”
ಓಹೋ, ಗಾಂಧಿ ತತ್ವಧಾರಿಗಳ್ ನೆಲೆಸಿದ
ತಾಣವಿದಿರಬೇಕು
ಸ್ವಾತಂತ್ರ್ಯ ಬರುವಮುನ್ನ ಆಂಗ್ಲರ ನೀತಿ ಬಾಧೆಗೆ
ಸಿಲುಕಿ ನಿಲಲಾರದೆ, ಈ ಎಡೆಗೆ ಬಂದು ನೆಲಸಿ
ಸ್ವಾತಂತ್ರ್ಯಬಂದೊಡನೆ, ಇದನೆಲ್ಲ ಬಿಟ್ಟುಪಾರಿರಬೇಕು.
ಆದಕೆ ಇಂತು ಹರಕು ಮುರುಕಾಗಿ ನಿಂದಿಹುದು.

(ಒಂದುಕಡೆ ಕುಳಿತು.)

ಎನಿತು ರಾಮಭಜನೆಗಳಾಗಿಹುದೋ ಇಲ್ಲಿ
ಎನಿತು ಮಹಾತ್ಮರುಪದೇಶವಾಗಿಹುದೋ ಇಲ್ಲಿ
ರಾಷ್ಟ್ರನಿರ್ಮಾಪಕರ, ರಾಜತಜ್ಞರ, ಸಾಧಕರ
ಸಂಸಾರಿಕರ ಸಾಧನಗೃಹವಾಗಿ ಮೆರೆದಿಹುದೋ
ಎನಿತು ಹುಲಿಸಿಂಹಗಳ ಹಿಡಿತಂದು ಹೆಂಗರುಳ
ಗೋವಂತೆ ಮಾಡಿಹರೋ, ಏನುಂಟೋ ?
ಅಸಾಧ್ಯವೇನೇನಾಗಿಹುದೋ ಆರು ಬಲ್ಲವರು.

[ಮನೆಯಲ್ಲಿ ಶಬ್ದವಾಗುವುದು.]

ಏನದು ಸದ್ದು !

ಆರೋ ನಡೆದಂತೆ ಸಪ್ಪಳವಾಗುವುದು
ಆರನೂ ಕಾಣೆ! ಆರುಂಟು?

[ಸುತ್ತಲೂ ನೋಡಿ]

ಹಾಳು ಮನೆಯಲಿ ಭೂತಗಳು ಓಡಾಡುವುದೆನ್ನುವರು
ಭೂತವೇ? ಏನುಂಟೋ?
ಇಲ್ಲಿ ಜನ ನೆಲಸಿದಾಗ ಗಾಂಧಿವ್ರತಗಳನಭ್ಯಸಿಸೆ
ನಿರಶನವ್ರತವ ಕೈಗೊಂಡು ತಾಳಲಾರದೆ ಜೀವ ಬಿಟ್ಟು
ಚಪಲದಿಂ ಈ ರೀತಿ ಗಾಳಿಯಲಿ ಓಡಾಡುತಿಹರೋ?
ಈ ಭೂತಗಳಿಗೆ ಅಂಜುವನು ನಾನಲ್ಲ
ನೋಡುವೆನು ಸಾಹಸವ ಏನಮಾಡುವುದೋ?

(ಎದ್ದು ಹುಡುಕುವನು)

ಸದ್ದು ಆಗುತಿಹುದು. ಆಗಲಿ.

(ಪಕ್ಕಕ್ಕೆ ನೋಡಿ)

ಓ! ಈ ಹೆಗ್ಗಣವೆ ಭೂತ! ಸರಿಯಾಯ್ತು
ಇದಕಂಜುವುದೇ!
ಆ ಕಾಲದಿಂ ಇಹುದೇನೋ
ಬಹುವಿಧದ ಬೋಧನೆಗಳ ಕೇಳಿ ಕೇಳಿ ಇದಕು
ಕೆಚ್ಚು ಹೆಚ್ಚಿರಬೇಕು. ಇಲ್ಲದೊಡೆ ಇದಕೆಲ್ಲಿ ಈ ಧೈರ್ಯ!

(ಹೆದರಿಸುವನು)

ಛೂಂ! ಹೆದರಿ ಬೆದರುವ ಪರಿಯಲ್ಲ ನೀನು
ಸತ್ಯಾಗ್ರಹವನಭ್ಯಸಿಸಿರಬೇಕು, ಎನಿತಾದರು
ಆಶ್ರಮದ ಹೆಗ್ಗಣವಲ್ಲವೆ?
ನೋಡುವೆನು ಇದರ ಬಿಲ ಎಲ್ಲಿ ಮಾಡಿಹುದೊ

(ಹುಡುಕಿ)

ಇದೋ! ಇಲ್ಲಿ ತೋಡಿಹುದು
ಆಯಸ್ಸಾಯ್ತು ಇನ್ನೇಂ ಇನಿತರಲೆ ಆರಾಮ
ಕುಸಿಯುವುದು.
ಗೋಡೆ ಕಲ್ಲೆಲ್ಲ ಕೊರೆದಿಹುದು
ಇನ್ನು ಮಣ್ಣು ಮಾತ್ರೇನಿಹುದು!
ಇನ್ನಿಲ್ಲಿರೆ ಆಪತ್ತು
ಹೊರಡುವೆನು. (ಹೊರಕ್ಕೆ ಬರುವನು.)

(ಒಂದು ಬಂಡೆಯಮೇಲೆ ಕುಳಿತು ವಿಶ್ರಮಿಸಿಕೊಳ್ಳುತ್ತಾ.)

ಹಾಳು ಮನೆಯೇಂ ಇನಿತರಲೆ ಕುಸಿಯುವುದು
ಗಾಂಧಿ ಮಹತ್ಮನೆನಿತು ತಪ ಉಪವಾಸಮಾಡಿ,
ರಾಷ್ಟ್ರ ಶಿಲ್ಪಿಗಳ ಸ್ವಾತಂತ್ರ್ಯ ಸಾಧಕರ ಬೆಳೆಸಿ,
ಬಲುಹಿಂದ ಜಾತಿ ಬದುಕಲೆಂಬಾಕಾಂಕ್ಷೆಯಿಂ
ಮುಸಿಮುಸಿನೆಗೆ ಬೀರಿ ಓಡಾಡಿಹ ಆಶ್ರಮವೋ
ಬದ್ಧಾಂಜಲಿಯಾಗಿ ಶುದ್ಧ ಮನದಿಂದ ಹೇರಾಮ
ಹೇರಾಮ ಎನುತ ರಾಮನಾಮದಿ ಪಾವನವಾಗಿಹುದೋ
ಪಾಶವಲಿ ದುರ್ಗುಣಗಳ ಪಡಿದಾಟವಾಗಲೆಂದೆಣಿಸಿದನೆ,
ಆ ಮಹಾತ್ಮ

(ಮರೆಯಲ್ಲಿ)

ಹೇ ರಾಂ, ಹೇ ರಾಂ.

**ದಾರ್ಶಿಕ** —

ಆರುಂಟು ಮರೆಯಲ್ಲಿ? ರಾಮನಾಮವ ಜಪಿಸುರು!
ಮಹತ್ಮರ ತಾರಕ ಉಪದೇಶದಿಂ ಕೆಲರ್ ಇಲ್ಲಿ ನಿಂದು,
ತಪವ ಗೈಯುತಿಹರೋ? ನೋಡುವೆನು.

(ಬಂದೆಯ ಹಿಂಭಾಗಕ್ಕೆ ಒರಲು ಗಾಂಧೀಜಿಯ ದರ್ಶನವಾಗುವುದು.)

ಮಹಾತ್ಮರ್ ! ಎಮ್ಮ ಕಾಪಿಟ್ಟ ಪ್ರಭು ! ಬಾಪು!
ಈ ಕೊರೆವ ಚಳಿಯಲ್ಲಿ
ಅಹಾ ! ನಿನಗಿಲ್ಲುಂ ಈ ಗತಿಯೆ, ಬಾಪೂ!

**ಗಾಂಧಿ** —

ಆರವರು ಇಲ್ಲಿಯೂ ಬಂದು ಬಾಧಿಪರ್?

**ದಾರ್ಶಿಕ** — ಎನ್ನ ಶುದ್ಧ ಭಾವದ ದೇವ! ನಿನ್ನ ಬಾಧಿಪಗೆ
ಬೇರೆ ಸೃಷ್ಟಿಸಿಹುದು ಲೋಕ
ಆಡದಿರು ಬಾಪೂ, ಅಂತಾಡದಿರು.

**ಗಾಂಧಿ** — ಆರಿವನೊ ಕಾಣೆ ?

**ದಾರ್ಶಿಕ** —

ನೀವ್ ಶ್ರಮಿಸಿ ಸ್ವಾತಂತ್ರ್ಯ ತಂದ ನಾಡಿಂದ ಬಂದಿಹೆನು

**ಗಾಂಧಿ** –

ಅಂತಾದೊಡೆ ನಿಮ್ಮ ನಂಬಲಾಗದು.
ಕಣ್ಣಿನಲಿ ನೀರತೋರಿ, ಕೈಲಿ ಕತ್ತಿಗೆಯ ಹಿಸುಗುವಿರಿ
ನಿಮ್ಮ ನಂಬಲಾಗದು.

**ದಾರ್ಶಿಕ** – ಆಡದಿರು ಬಾಪು, ಅಂತಾಡದಿರು.

(ಕಾಲಮೇಲೆ ಬೀಳುವನು.)

**ಗಾಂಧಿ** –

(ಗದ್ಗದದಿಂದ.)

ಮೇಲೇಳು.

ಅಂದೊಡೇಂ ಫಲ
ಎನ್ನ ಕರುಳ ನಾನೇ ಚಿವುಟಿದಂತೆ

**ದಾರ್ಶಿಕ** –

(ಎದ್ದು)

ಬಾಪು! ತೇಜದೇಹದಿ ಯೋಗದಲಿ ಚರಿಸದೆ
ಮಾನವರಾಗಿ ಈ ಕೊರೆವ ಚಳಿಯಲ್ಲೇಕಿರುವಿರಿ ?

**ಗಾಂಧಿ** –

ಅಂದು ದೇವದೂತರು ಬಂದು, ಪಾಲಕಿತಂದು
‘ಬಾ’ ಎಂದು ಕರೆದರ್. ಬರುವೆನೆಂದೇಳೆ
ಕೈಕಾಲ್ ಬಿಗಿದು ಸೆರೆಯಿತ್ತು.

**ದಾರ್ಶಿಕ** –

ಆ ದೇವ ದೂತರ್ ನಿಮ್ಮ ಬಂಧಿಸಿದರೆ ?

**ಗಾಂಧಿ** –

ದೇವ ದೂತರ್ ಅಂತೆಸಗುವರೆ ?

**ದಾರ್ಶಿಕ** – ಮತ್ತಾರ್ ?

**ಗಾಂಧಿ** –

ನೀವೆಮ್ಮ ಬಂಧಿಸಿದಿರಿ.
ನೀವೆಸಗಿದಪಚಾರದಿಂ ಇಲ್ಲಿ ಎನಗೆ ಬಂಧನವಾಯ್ತು.
ದೇವದೂತರ್ ಕಣ್ಣನೀರ್ತುಂಬಿ, ನಿಮ್ಮ ಜನ ನಿಮ್ಮ
ಬಂಧಿಸಿಹರೆ ? ಎನುತ ಆಗಸವ ಸೇರಿದರು.

**ದಾರ್ಶಿಕ** – ನಾವಲ್ಲ ಬಾಪು.

ಅಂದು ನಿಮ್ಮ ಭೌತದೇಹದ ಬಹು ವಿಜೃಂಭಣೆಯಿಂ
ಶಾಸ್ತ್ರೋಕ್ತದಿಂ ಭಸ್ಮಮಾಡಿ, ಗಂಗೆ ಸಂಗಮ ಮಾಡಿ
ನಿಮ್ಮ ಹೆಸರಿಂದ ಬಲುಧನವ ಶೇಖರಿಸಿ
ಬಡವರಾರಾಧಿಸಿಹೆವು
ಭಜನೆಗಳ ಮಾಡಿದೆವು. ನಿಮ್ಮ ಪಾವುಗೆ ಪುಸ್ತಕಗಳ
ಬಲು ನಮ್ರತೆಯಿಂ ನಮಸ್ಕರಿಸಿದೆವು. ಗಂಟೆಗಳ ಬಾರಿಸಿ
ಎಳೆನೀರು ಹಾಲು ಸಕ್ಕರೆಯಿಂ ದೇವರನಭಿಷೇಚಿಸಿದೆವು
ನಿಮ್ಮ ಸದ್ಗತಿ ಕೋರಿ ಕಣ್ಮುಚ್ಚಿ ಪ್ರಾರ್ಥನೆಯ ಮಾಡಿಹೆವು
ಪೂಮಾಲೆ ಮಧ್ಯೆ ಪಚ್ಚೆತೆನೆಯಂತೆ
ಮಾತು ಮಾತಿಗು ನಿಮ್ಮ ಹೆಸರ ಬಳಸುತಿಹೆವು
ನಿಮ್ಮ ಭಾವ ಚಿತ್ರವ ಕಂಡು 'ಬಿಟ್ಟು ಪೋದೆಯಾ
ಬಾಪು !'
ಎಂದು ನಿಟ್ಟುಸಿರ ಬಿಡುತಿಹೆವು
ಅದೇಕೆ ಬಂಧನವಾಯ್ತು ನಿಮಗೆ ? ಬಾಪು!
ಭಯ ಭಕ್ತಿಯಿಂ ಉಪಚಾರಮಾಡಿಹೆವು.

**ಗಾಂಧಿ** –

ಉಪಚಾರವಲ್ಲ, ಭಯಭಕ್ತಿಗಳಲ್ಲ ಅವು
ಮಂತ್ರದ ಮಾವುಗಿಡದಂತೆ

**ದಾರ್ಶಿಕ** –

ಕ್ಷಮಿಸುವುದು ಬಾಪು
ನಿಜಕು ಮಾಡಿಹೆವು

**ಗಾಂಧಿ –**

ಹುಡುಗು ಮಾತಾಡಬೇಡ
ನಮ್ಮ ಶ್ರಮದಿಂದ ಬಂದ ಫಲವದು
ಹಿಂದೆ ಭಸ್ಮಾಸುರಗೆ ಕೊಟ್ಟ ವರದಂತೆ ಆಗಿಹುದು
ನಿಮಗೆ

**ಪಾರ್ಶಿಕ –**

ಹಾಗಿಲ್ಲ ಬಾಪು ! ನಿಮ್ಮ ತತ್ವಗಳ ಹಿಡಿದು
ರಾಷ್ಟ್ರ ಸತ್ಪಥವ ತುಳಿಯುತಿಹುದು
ನಿಮ್ಮಿಂದ ದತ್ತವಾಗಿಹ ಸ್ವಾತಂತ್ರ್ಯ ಕಾಪಿಡುವೆವು
ನೀವಿತ್ತ ಸಂದೇಶ ಸಫಲಗೊಳಿಸುವೆವು

**ಗಾಂಧಿ –**

ಸಾಕು ಸುಮ್ಮನಿರು
ಹಾಗಿದ್ದರೆನಗೇಕೆ ಈ ಬಂಧನ ?
ತೇಜರೂಪದಿ ಆ ಸುಖವ ಸೇರುತಿರ್ದೆ
ಹೇ ರಾಂ, ಹೇ ರಾಂ.

**ಪಾರ್ಶಿಕ –** (ಮೌನ)

**ಗಾಂಧಿ –**

ತಪದ ಬಲದಿಂದ
ರಾಷ್ಟ್ರ ಮೂಲೆ ಮೂಲೆಯ, ಜನ ಜೀವರ
ನೋಡುತಿರ್ಪೆನು
ಅದಾರು ಏನೇನು ಮಾಡುತಿಹರೊ, ಎಂತೆಂತು
ಓಡುತಿಹರೋ. ವಿಶ್ವಾಸ ಘಾತುಕರಾದು




" ಸ್ವಾತಂತ್ರ್ಯ ಸ್ವಪ್ನದೋಡಾಟವಾದೀತು ಎಚ್ಚರಿಕೆ! "

ರಾಷ್ಟ್ರ ದ್ರೋಹಕರಾಗು ಎನಿಸಿತೆಸಿತು ಎಂಬುದ.
ಮುಂದಿಯ ಕೃತ್ಯಗಳೇನೇನು ? ಮಾತೇನು ?
ನಾಟಕರಂಗದಲಿ ಆರಾರು ಏನೇನನೆಸಗುತಿಹರೋ
ಕಾಣುತಿಹೆವು.

ಅವರ ಕನಸಿನಲಿ ಮನಸಿನಲಿ ಓಡಾಡುತಿಹೆವು
ಅವತರಿಸಗುತಿಹ ಕೃತ್ಯಗಳ ಪ್ರತಿಬಿಂಬ
ಭವಿಷ್ಯ ಕಾಲಗರ್ಭದಲಿ, ಮೇಘಮುದ್ರಿತ
ಆಗಸದಂತೆ ಕಾಣುತಿಹುದು.
ಎಚ್ಚರಿಕೆ ! ಕೆಂಧೂಳೆದ್ದಿಹದು
ಸಿಡಿಲೆರಗಿ, ನಾಡೆ ಕಣ್ಣೀರಿಂದ
ತೋಯ್ದೀತು ! ಎಚ್ಚರಿಕೆ !

ಸ್ವಾತಂತ್ರ್ಯ ಸ್ವಪ್ನದೋಡಾಟವಾದೀತು ಎಚ್ಚರಿಕೆ !

ದಾರ್ಶಿಕ –

ಮತ್ತೇನ ಮಾಡಬಯಸುವಿರಿ ಬಾಪು !

ಗಾಂಧಿ –

ಸತ್ಯವೆಂದುಸರದೆ, ಸತ್ಯವಾಚರಿಸು
ಮುರ್ಮಮಾತುಗಳ ಬಿಟ್ಟು ಧೀರನಾಗಿನಿಲ್ಲು
ಸಮಭಾವ ದೃಷ್ಟಿಯಿಂ ಪವಿತ್ರನಾಗು
ನಮ್ಮ ಹೆಸರ ಹೇಳಿದೊಡೆ ನಮಗೆ ಬಹು ನೋವು
ನಾವು ನಡೆದಂತೆ ನಡೆದರೆ ಅದುವೆ ನಿಮ್ಮ
ನೀಡ ಮುಕ್ತಿ

**ದಾರ್ಶಿಕ** –

ಅಂತಾದೊಡೆ ನಾವದನಾಚರಿಸುವರೆಗುಂ
ನೀವಿಲ್ಲೆ ಚಳಿಯಲ್ಲಿ ಕೊರಗುತಿಹಿರಾ ?

**ಗಾಂಧಿ** –

ಮುತ್ತೀನ ಮಾಡುವುದು
ಬಗೆಬಗೆಯ ಪಾಶಗಳಿಂ ಬಂಧಿಸಿಹಿರಿ.
ನಿಮ್ಮ ಕ್ಷೇಮವ ನೀವೆ ಕಾಯ್ದುಕೊಂಡು
ನಿಮ್ಮ ಕುಶಲವ ನೀವೆ ಮಾಡಿಕೊಂಡು
ಕೆಡಕು ಕಳಚಿದ ಮನದಿಂದ ಒಮ್ಮೆ 'ಬಾಪೂ'
ಎಂದೊಡನೆ ನಮಗೆ 'ಮೋಕ್ಷ'

**ದಾರ್ಶಿಕ** –

ಅಮಹೆ ಬಾಪು ನಿಮ್ಮಾಣತಿ

**ಗಾಂಧಿ** –

ಅಹುದು ಅಮವೆ ಕೊನೆಯಾಣತಿ
ಹೊರಡು.

**ದಾರ್ಶಿಕ** –

ಸತ್ಯಾವತಾರಿ ಬಾಪು ನಮಿಸುವೆನು.

(ನಮಸ್ಕರಿಸಿ ಹೊರಡುತ್ತಾ)

ಸತ್ಯಚರಿತನರಿತ್ತ ಸಂದೇಶ ಮಾಲೆಗಳ
ಪೊತ್ತು ಪೋಗುವೆನು ನಾಡಿಂಗೆ,
ಇದರಿಂ ನಾಡ ಸಿಂಗರಿಸಿ ನೋಡುವೆನು ಭವ್ಯವ.

———○———

# ದೃಶ್ಯ ೭

(ದಿಲ್ಲಿನಗರದ ಜನಭರಿತ ಬೀದಿಯೊಂದರಲ್ಲಿ ವಾರ್ತಿಕನ ಪ್ರವೇಶ.)

**ವಾರ್ತಿಕ –**

ನಮ್ಮ ನಾಡಿನ ನಿಲುವು, ಬೆಳವು ಇಲ್ಲುಂಟು
ಇತಿಹಾಸ ಮಡಿಲಲ್ಲಿ ಹಿರಿರತ್ನದಂತೆ ಈ ನಗರ

(ಚಿತ್ರರಸ್ಥಳದಲ್ಲಿನಿಂತು.)

ಬನ್ನಿರೈ ಬನ್ನಿರೈ ಸಂದೇಶ ತಂದಿಹೆನು ಅಲ್ಲಿಂದ
ಹೆಚ್ಚುಂಟು ಮೆಚ್ಚುಂಟು ಸುಖವುಂಟು ಸತ್ವವುಂಟು
ಸಾಧಿಸುವ ಬೋಧಿಸುವ ಪಠಿಸುವ ಪೋಷಿಸುವ

(ಜನರ ಗುಂಪು ಸೇರುವುದು)

ಕೈ ಎತ್ತಿ ಹೇಳುವೆನು ಸತ್ಯವಿದು ಸತ್ಯವಿದು
ಈ ನಾಡು ಸಾಮಾನ್ಯವಲ್ಲ, ಸಾಮಾನ್ಯ ಜನವಲ್ಲ
ಈ ಗಾಳಿ ಬೆಳಕು, ಈ ನೀರು ಈ ನೋಟ
ಈ ಯುಸಿರು, ಈ ಹೆಸರು, ಹೆಚ್ಚುಂಟು ಮೆಚ್ಚುಂಟು
ಶಾಸ್ತ್ರಗಳು ನೀತಿಗಳು ಧರ್ಮಗಳು ಕರ್ಮಗಳು
ನಿಜವುಂಟು ಬಲವುಂಟು ಸುಖವಸಾಧಿಪದುಂಟು
ಯೋಗಿಗಳು, ತ್ಯಾಗಿಗಳು, ರಾಗಿಗಳು, ವಿರಾಗಿಗಳು,
ಶಾಸ್ತ್ರಕರು, ಸಿದ್ಧಕರು, ಶಿಲ್ಪಕರು, ಸುಧಾರಕರು,
ಸಬ್ಬಿಗರು, ಧರ್ಮಿಗರು, ಗಾಯಕರು, ಚಿತ್ರಕರು
ಯಾರುಂಟು ಯಾರಿಲ್ಲ ಏನುಂಟು ಏನಿಲ್ಲ

ಜನ ೧ –

ಜೀವನೊ ಕಾಣೆವು
ಹುಚ್ಚನಂದದಿ ಆಡುತಿಹನು

ಜನ ೨ –

ದೇಶ ಪ್ರೇಮದ ಹುಚ್ಚನಿವ
ಸ್ವಾತಂತ್ರ್ಯ ಬಂದೊಡನೆ ಜೋರ್ತಾಗಿ ಹೋಗಿಹುದು.

ದಾರ್ಶಿಕ –

ಸ್ವಾತಂತ್ರ್ಯ ಬಂದಿಹದು ಎನಬೇಡಿ
ಸ್ವಾತಂತ್ರ್ಯ ಎಲ್ಲಿಹುದು ನಿಮಗೆ.

ಜನ ೩ –

ನಿಜಕು ಹುಚ್ಚನಿವ.
ಸ್ವಾತಂತ್ರ್ಯ ಬಂದಿಹುದು. ಸರ್ವಾಧಿಕಾರವಿಹುದು
ಎಂದೆನುವ ಅರಿವಿಲ್ಲ ಇವಗೆ
ಹೀಗೇಕೆ ಆಗಿಹುದೊ ಇವಗೆ ಪಾಪ !

ದಾರ್ಶಿಕ –

ಸ್ವಾತಂತ್ರ್ಯತಂದವರ ಕಡೆಗಣಿಸಿ ನೂಕಿಹಿರಿ
ಕಡುಪಾಶ ಹಿಡಿ ಬಂಧ ಕಟ್ಟಿಹುದು ನಿಮ್ಮ
ಒಳಗುದ್ದು ಸಿಡಿಮುದ್ದು ತಟ್ಟಿಹುದು ನಿಮ್ಮ
ಮುಂದೆ ಮುಂದೆನುತ ಹಿಂದಾಗಿ ಹೋಗಿಹಿರಿ
ತಿಳಿವಿದ್ದು ತಿಳಿವಿಲ್ಲ ಬಲವಿದ್ದು ಬಲವಿಲ್ಲ
ಹುಚ್ಚಿಲ್ಲ ಬೆಪ್ಪಿಲ್ಲ, ಅರಹುಚ್ಚು ಅರೆಬೆಪ್ಪು.

ಜನ ೩ –

ಆರಿಹನೊ ! ಅತಿಯಾಗಿ ಆಡುವನು
ಹುಚ್ಚೆಂತೆ ಬೆಪ್ಪಂತೆ, ಹಿಡಿಯಿರೊ ಇವನ

ಜನ ೪ –

ಹಾಗಲ್ಲ ಹಾಗಲ್ಲ, ತಡೆಯಿರಿ
ಯಾರಲ್ಲಿ ಏನುಂಟೋ ತಿಳಿದವರು ಆರುಂಟು?

ಜನ ೨ –

ಇಲ್ಲೇಕೆ ಬಂದಿಹನೋ
ಹೋಗೆಂದು ಹೇಳಿರೈ

ಜನ ೩ –

ಜನವ ಹುಚ್ಚು ಬೆಪ್ಪೆನ್ನುವ
ಇವನ ಹುಚ್ಚು ಬಿಡಿಸುವೆವು
ತೂರಿರೋ ಕಲ್ಲುಗಳ.

ಬಾಹ್ಲೀಕ –

ಆರಯ್ಯ ಧೀರರು !
ಕಲ್ಲು ಮಣ್ಣಿಂ ಜವಲ ಜಪ್ಪರಿಸುವರು
ನಿಮ್ಮ ಕ್ಷಾತ್ರ ಬಾಳಿಂದು ಇಲ್ಲಿಗಿಳಿದುದೇ ?
ಹಾ ದೇವ, ಹಾ ದೇವ!

ಸೂರ್ಯ ಚಂದ್ರರ ಗೌರವವಂಶ
ಸಾಗರವ ಗುಟುಕಿಸಿ, ಮೇರುವನೆ ತಿರುಗಿಸಿ
ಗಂಗೆಯನೆ ಉರುಳಿಸಿ ಸಗ್ಗವನೆ ಸೆಳೆತಂದ
ಗಾಂಡೀವ ಕೈಗೊಂಡ ವೀರವಂಶವಿಂದು

ಕಲ್ಲುಪಣ್ಣಂ ಕೈಗೊಂಡಿಹುದೇ ?
ಹಾ ದೇವ! ಹಾ ದೇವ! ಕಾಲವೆ, ಕನಿಕರವ ತೋರ್ಕೈ

**ಜನ ೧** –

ಅದೋ ಕಣ್ಣಿಂ ನೀರು ಹರಿಯುತಿಹುದು
ಹುಚ್ಚನಲ್ಲಿವ
ಜನವ ಕಂಡು ಸಂತಾಪ ಪಡುವ ಹುಚ್ಚನೆ ?
ಹಾಗಲ್ಲ! ಹಾಗಲ್ಲ.

(ಗುಂಪು ದಾರ್ಶಿಕನನ್ನು ನೋಡುತ್ತಾ ಸ್ತಬ್ಧವಾಗಿ ನಿಲ್ಲುವುದು.)

**ದಾರ್ಶಿಕ** –

ಏನ ನೋಡಿಪಿರಿ ನನ್ನಂ ಜೋಲು ಮುಖದಿಂ
ಮುಖಪರಳಿ ಕೆದರಲಿ ಕಣ್
ಕಿವಿಗೆದರಿ ಕೇಳಿಕೇಳಿ ಆಗುತಿಹುದು
ಎಡೆಬಿಡದೆ ಕೂಗಿಂದ ಕೂಗು
ದೇವ ಲೋಕದಿಂ ಪಿತೃಲೋಕದಿಂ ವೀರಲೋಕದಿಂ
ಬಾಣ ಮಂಚದಿಂ ಕೆಂಪ ಕುಂಡದಿಂ ಗುಂಡಿನೇಟಿನಿಂ
ಕೂಗುತಿದೆ ಕೂಗಿಂದ ಕೂಗು
'ಕಾಪಿಡಿರಿ ಧರ್ಮವನು ಕಾಪಿಡಿರಿ ದೇಶವನ್ನು
ಕಾಪಿಡಿರಿ ಶಾಸ್ತ್ರಗಳ ನೀತಿಗಳ
ಕಾಪಿಡಿರಿ ಸ್ವಾತಂತ್ರ್ಯ' ಎಂದೆನುವ ಮಾತು
ಹೊರೆ ಹೊರೆಯಾಗಿ ಪೇರುತಿಹುದು ನಮ್ಮ
ನಿಂತೇನ ನೋಡುಪಿರಿ,
ಮನಮಂಕು ಹರಿಯಲಿ
ಮೈ ಜೋಮು ಇಳಿಯಲಿ

ಎಮ್ಮ ರಾಷ್ಟ್ರ ಪಿತನಿಂದು ಪಡೆದು ಗೇಣಾಗಿ ಚಳಿಯಲ್ಲಿ
ಕೊರಗುತಿಹನು
ನಾವೆಸಗಿದಕೃತ್ಯ ಹಿಡಿಪಾಶವಾಗಿಹುದವಗ್ಗೆ

ಜನ ೩
ಈ ಮಾತು ನಿಜವುಂಟೆ ?

ಜನಳ
ನಮ್ಮಿಂದ ರಾಷ್ಟ್ರಪಿತಗೆ ಬಂಧನವೆ ?

ಜನ ೨
ಆ ಬಂಧನವ ಬಿಡಿಸಲಪ್ಪುದೆ ?

ಛಾರ್ಶಿಕೆ—

ಅಪ್ಪುದಪ್ಪುದು
ನಮ್ಮ ಕ್ಷೇಮವ ನಾವೆ ಕಾಯ್ದುಕೊಂಡು
ನಮ್ಮ ಕುಶಲವ ನಾವೆ ಮಾಡಿಕೊಂಡು
ಕೆಡಕು ಕಳಚಿದ ಮನದಿಂದ ಒಮ್ಮೆ 'ಬಾಪು'
ಎಂದೊಡನೆ ರಾಷ್ಟ್ರಪಿತಗೆ ಮೋಕ್ಷ !
ಆ ಗುಂಪು ಈ ಗುಂಪು ಸೊಂಪಾಗಿ ಸೇರೋಣ
ಹೊಸ ರಾಷ್ಟ್ರ ಒಲುಮೆಯಿಂದ ನಿರ್ಮಾಣ ಮಾಡೋಣ
ಅಲ್ಲಿಂದ ಇಲ್ಲಿನಕ ಹೊಸ ಬೆಳಕ ಹರಿಸೋಣ
ಒಳಹುಳುಕು ಮನ ಕೊಳಕು ಕತ್ತರಿಸಿ ಎಸೆಯೋಣ
ಹಲ ಮುಖದ ನಗುಮುಖವ ಮನಸಾರೆ ಕಾಣೋಣ
ಜೀವ ಜೀವರ ನೇಹ ಬೆಳಸೋಣ ಬೆಳಗೋಣ
ಬನ್ನಿರೈ, ಸೇರಿರೈ ಇದೆ ಸಮಯ ಇದೆ ಸಮಯ
ನಮ್ಮ ತಡೆಪರಿಲ್ಲ ಇಲ್ಲ ಎದ್ದೇಳಿ

ಬೆಂಬಲವ ನೀಡೋಣ ಭವ್ಯ ಭಾರತಿಯ ಕಾಣೋಣ

(ಮೈ ಪುಳಕಿತನಾಗಿ)

ಓಹೋ ಅದೋ ನೋಡಿ, ನೋಡಿ
ಬರುತಿಹಳು ಮಾತೆ ಸರ್ವಾಲಂಕೃತವಾಗಿ
ಕೆಂದಾವರೆ ಮಂದಗಮನದಡಿಗೆಜ್ಜೆ ಘಲ್ ಸಂದಿಹುದು
ಮಿರುಗು ಪೀತಾಂಬರವುಟ್ಟು ಹೊಳೆವ ಆಭರಣತೊಟ್ಟು
ಎಳೆಕಳೆಯ ಚಂದಿರ ವದನೆ ಬರುತಿಹಳು ಬರುತಿಹಳು
ಕೋಟಿರತ್ನ ಕಿರೀಟ. ತ್ರಿವರ್ಣಧ್ವಜಹಾರಾಟ
ಹವಳತುಟಿಯಿಂದ ಹೊಮ್ಮಿಹುದು ಎಳೆನಗೆಯು
ಬಾರೌ ತಾಯೆ, ಭಾರತಿ, ಬಾರೌ

(ಕೈ ಎತ್ತಿ ಕೂಗುವನು)

ಬನ್ನಿಗೈ ದೇವಿ ಬಂದಿಹಳು
ಕೋಟಿ ಕೋಟಿ ಕಂಠಕಂಠದಿಂ
ಹೊರಡಲಿ ಜೈಕಾರ

(ಗುಂಪು ಜಯಕಾರ ಮಾಡುವುದು)

ಬಾರೌ ತಾಯೆ,
ವಿಶ್ವಪೀಠವದು ನಿನಗಾಗಿ ಕಾದಿಹುದು
ವಿಶ್ವಭಾರತಿಗೆ ವಿಶ್ವ ಪ್ರೇಮವಿಹುದು.
ತಾಯೆ,
ಏರು ವಿಶ್ವ ಸಿಂಹಾಸನವ

ಸ್ವಾತಂತ್ರ್ಯ ಸಾಧಕರ ವೀರ ಬಾಹು ಸೋಪಾನ
ರಾಷ್ಟ್ರ ನಿರ್ಮಾಪಕರ ಚತುರ ಕಲೆಯು ಸೋಪಾನ
ಸ್ವಾತಂತ್ರ್ಯ ಕಾಪಿಡುವ ಧೀರ ವಜ್ರದೆದೆಯು ಸೋಪಾನ

ದೀನರ ಸಲಹುವ ಕೈಚಿನ್ನ ಸೋಪಾನ

ಏರು ತಾಯೆ, ಏರು ವಿಶ್ವ ಪೀಠವ

ಕಣ್ಣಾನೋಟವೇಕೆ ಅಲ್ಲಿಲ್ಲಿ ಓಡುವುದು ತಾಯಿ
ಬಿಲ್ಲ ಬಾಣದಂತೆ ಸಿದ್ಧವಿದೋ, ನಿಂದಿಹೆವು ನಿಂದಿಹೆವು
ನಗೆಮುಖದ ತಾಯೆ ಏರು, ಏರು.
ಸತ್ಯಮೇವಜಯತು
ಅಹಿಂಸಾ ಪರಮೋ ಧರ್ಮಃ
ಊಂ, ಏರು.
ನಹಿ ಜ್ಞಾನೇನ ಸದೃಶಂ
ಸರ್ವೇಜನಃ ಸುಖಿನೋ ಭವಂತು

ಕೂಡುವುದು ತಾಯೆ ಸುಖಾಸನದಿ
ವಿಶ್ವಭಾರತಿಗೆ ಬಹುಪರಾಕ್ !
ವಿಶ್ವಮಾತೆಗೆ ಬಹು ಪರಾಕ್

(ಮೇಲೆನೋಡಿ.)

ಓಹೋ ! ಓಹೋ !
ಕಿಕ್ಕಿರಿದು ಬರುತಿಹರು ದಿವಿಜರೆಲ್ಲ
ಸಗ್ಗ ಬರಿದಾಗಿಹುದು
ಎಲ್ಲ ಲೋಕಗಳು ಹರಸುತಿಹವು
ಎಲ್ಲ ಪಿತೃಗಳು ತೃಪ್ತರಾಗಿಹರು
ಅಹ! ಮಾತೆಯೇಂ ಭೂಷಿತಳಾಗಿ ಎಳೆ ನಗೆಯು
ಬೀರುತಿಹಳು
ಏಂ ! ಸೌಭಾಗ್ಯ ನೋಟವಿದು
ಚಾಮರವನಿಕ್ಕುವರು, ಸತ್ತಿಗೆಯು ಹಿಡಿವರು

ಶೃಂಗಾರ, ವೈಯ್ಯಾರ
ನಾಟ್ಯಗಳು ನೃತ್ಯಗಳು
ಆನಂದ, ಆನಂದ, ಆನಂದ!!!

(ಕುಣಿಯಲು ಹೋಗಿ ಕನಸಿನಿಂದ ಎಚ್ಚರವಾಗುವುದು)

ಇದೇಂ, ಕನಸೇ, ಕನವರಿಕೆಯೇ! (ನಗುವನು)

(ಎದುರಿಗಿಪ್ಪ ಗಾಂಧಿ, ವಿವೇಕಾನಂದ ಬುದ್ಧ ಇವರುಗಳ
ಭಾವಚಿತ್ರಗಳನ್ನು ನೋಡಿ)

ನಿಮ್ಮ ಕನಸ ಸಂದೇಶ ಮಂಗಳವ ಮಾಡಲಿ.
ಚಣವೊಂದ ಕಳೆಯದೆ ಶ್ರಮಿಸುವೆನು ಸದಾಗಾಗಿ
ಭರಿತ ಭಾರತಿಯ ಭವ್ಯವರಳಲಿ.

(ಪಕ್ಕದಲ್ಲಿರುವ ಚರಕವನ್ನು ನೋಡಿ)

ಬಾರೈ !
ಎಮ್ಮ ಭವ್ಯರಾಷ್ಟ್ರಕೆ ನೀ ಸೇತು
ನವಯುಗದಾರಾಧನೆಗೆ ನೀ ಹೇತು.

ಆ ಯುಗದಿ ಶ್ರೀರಾಮ, ರಾವಣಾದಿಗಳ ಸಂಹರಿಸೆ
ಸಾಗರವ ದಾಟಲು ನೀನಾದೆ ' ಶ್ರೀರಾಮಸೇತು ' ವೆಂದು
ಈ ಯುಗದಿ ಮನದಹಿತವನು ದಹಿಸೆ
' ಚರಕ 'ವೆಂಬಭಿದಾನದಿ ತಿರುಗುತಿಹೆ

ನಿನಗೆ ಮನೆಮನೆಯೆ ಆಶ್ರಮ
ಮನಮನವೆ ಮಂಟಪ

(ಚರಕದಿಂದ ನೂಲುತ್ತಾ)

ಶ್ರೀರಾಮನಾಮದಿ ತಿರುತಿರುಗಿ
ಆ ರಾಮರಾಜ್ಯವೆಳೆತಾರೈ.

ರಘುಪತಿ ರಾಘವ ರಾಜಾರಾಮ
ಪತಿತ ಪಾವನ ಸೀತಾರಾಮ
ಇಷ್ಟಪ್ರದಾಯಕ ಸೀತಾರಾಮ
ದುಷ್ಟ ಸಂಹಾರಕ ಜೈಜೈರಾಮ
ಸದ್ಗುಣಪೂರ್ಣ ರಾಜಾರಾಮ
ಮಂಗಳರೂಪ ಸೀತಾರಾಮ



# ತಿದ್ದುಪಡಿ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| 1 | 5 | ಹಿಮುತ್ಪರ್ವತ | ಹಿಮವತ್ಪರ್ವತ |
| 2 | 1 | ಅರುಂಟು | ಆರುಂಟು |
| 3 | 6 | ಧೃವತಾರೆ | ಧ್ರುವತಾರೆ |
| 5 | 5 | ನಡೆಸಿಹಿರಾ | ನಡೆಸಿಹಿರಾ |
| 10 | 9 | ಛತ್ರಿ | ಛತ್ರ |
| 11 | 11 | ಕಾಪಿಟ್ಟಿಹಿರ | ಕಾಪಿಟ್ಟಿಹಿರಿ |
| 14 | 16 | ಶಭ್ದ ರಾಸ್ತ್ರ | ಶಬ್ದ ಶಾಸ್ತ್ರ |
| 15 | 3 | ಪಠಸಿಟ್ಟ | ಪಠಿಸಿತ್ತ |
| 15 | 7 | ತೊಡಿರ್ಕೆ | ತೊಡರ್ಕೆ |
| 15 | 12 | ಅನುಷ್ಟಾನ | ಅನುಷ್ಠಾನ |
| 17 | 4, 7 | ಸೃಷ್ಠಿ | ಸೃಷ್ಟಿ |
| 18 | 20 | ಸದ್ಭ್ರಹ್ಮಚರ್ಯ | ಸದ್ಬ್ರಹ್ಮಚರ್ಯ |
| 19 | 13 | ಅನುಷ್ಟಾನ | ಅನುಷ್ಠಾನ |
| 22 | 2 | ಬಂದಿಹರಿ | ಬಂದಿಹಿರಿ |
| 23 | 20 | ಸಾವಿತ್ರ | ಸಾವಿತ್ರಿ |
| 13, 25 | 9, 4 | ಭಗವನ್ | ಭಗವಾನ್ |
| 25 | 15 | ಐತಂಡೆಪ | ಐತಂಪಡೆ |
| 29 | 4 | ವಾಜೀಯು | ತೇಜಗಳು |
| 29 | 19 | ಉತ್ತಮರಾಗಿಹರಿ | ಉತ್ತಮರಾಗಿಹಿರಿ |
| 32 | 17 | ಒಡದೇಳಿ | ಒಡದೆದ್ದು |
| 33 | 10 | ಸಿದ್ಧಗಳ | ಸಿದ್ಧತೆಗಳ |
| 36 | 11 | ಹದಮಾಡ | ಹದಮಾಡಿ |

## ಇದೇ ಗ್ರಂಥಕರ್ತರ ಮುಂದಿನ ಪ್ರಕಟಣೆಗಳು :

೧. **ಬೆಳದಿಂಗಳೋಲೆಗಳು**

(ತಿಳಿಹಾಸ್ಯ, ಮೆಲು ಶೃಂಗಾರದಿಂದ ಆದರ್ಶ ದಂಪತಿಗಳನ್ನಾಗಿ ಮಾಡುವ ಅತ್ಯಂತ ಬೋಧಕ ಗ್ರಂಥ)

೨. **ರಾಮಣ್ಣ** (ಜೀವನ ಚಿತ್ರ)